

ಶ್ರೀ ಕಲ್ಕೀ ವಿರಚಿತ

# ಕೀಪುಮಾ ಸಮರಕಲೆ

ಸನ್ಮಾರ್ಗಗ್ರಂಥ




ಸಂಪಾದಕರು

## ಮಂಜುನಾಥ ಬೆಳ್ಳಿಕುಪ್ಪಿ

ಕೀಪುಮಾ ಸಮರಕಲೆ ಗುರುಕುಲ ।ಸೂರ್ಯನಾರಾಯನ ಬೆಟ್ಟ ।
ಮಹೇಂದ್ರ ಪರ್ವತ ।ಸವಟಗಿ ೫೯೧೧೦೪|

i



KS GURUKUL®
Free Education - Reach your Destination

# ಕ್ರಾಂತಿ ಸಂದೇಶ ಪ್ರಕಾಶನ
# ಪ್ರಥಮ ಕಾಣಿಕೆ


| | | |
|---|---|---|
| ಗ್ರಂಥ | : | ಕೀಪುಮಾ ಸಮರಕಲೆ |
| ಲೇಖಕರು | : | ಶ್ರೀ ವಿಷ್ಣು ದಶಾವತಾರ ಕಲ್ಕೀ |
| ಸಂಪಾದಕರು | : | ಮಂಜುನಾಥ ಬೆಳ್ಳಿಕುಪ್ಪಿ |
| ಮೂಲ ಭಾಷೆ | : | ಸಂಸ್ಕೃತ |
| ಕನ್ನಡಕ್ಕೆ ಅನುವಾದ | : | ಮಜುನಾಥ ಬೆಳ್ಳಿಕುಪ್ಪಿ |
| ಪ್ರಥಮ ಮುದ್ರಣ | : | ೨೦೧೫ |
| ಹಕ್ಕುಗಳು | : | ಕ್ರಾಂತಿ ಸಂದೇಶ ಪ್ರಕಾಶನ ® |
| ದರ | : | PDF FREE \| BOOK ₹108 |


ಸೂಚನೆ : ಅಧರ್ಮಿಯರಿಗೆ ಈ ಗ್ರಂಥ ಅರ್ಥವಾಗುವುದಿಲ್ಲ । ಆದ್ದರಿಂದ ನಿವು ಧರ್ಮಮಾರ್ಗವನ್ನು ನಿಮ್ಮದಾಗಿಸಿ ಕೊಂಡು ಮುಂದುವರೆಯಿರಿ । ಈ ಗ್ರಂಥ ಸನಾತನ ಗ್ರಂತಗಳ ಸಾರವಾಗಿದೆ । ಸರ್ವರಿಗೂ ಮುಕ್ತಿಮಾರ್ಗಕ್ಕೆ ಸ್ವಾಗತ

- ಶ್ರೀ ಕಲ್ಕೀ

# ಅಧ್ಯಾಯ

# 1

# ಪರಿಚಯ

जै कल्कि जै जगत् पते । पद्मापते रमा पते ।।
की प उमा कल्की: ।। धर्मस्तापनार्तें कलियुगे ।।
भार्गवपुराण

ಜೈ ಕಲ್ಕೀ ಜೈ ಜಗತ್ ಪತೆ । ಪದ್ಮಾ ಪತೆ ರಮಾ ಪತೆ ॥
ಕೀ ಪ ಉಮಾ ಕಲ್ಕಿಃ । ಧರ್ಮ ಸ್ಥಾಪನಾರ್ಥೆ ಕಲಿಯುಗೆ॥

ಶ್ರೀ ರಾಮನು ಶ್ರೀ ಪರಶುರಾಮರ ಕ್ರೋದಾಗ್ನಿಯ ತನಿಸಲು ನುಡಿದ ಭವಿಷ್ಯವಾಣಿ ಈ ಮೇಲಿನ ಶ್ಲೋಕ. ಈ ಶ್ಲೋಕವು ಪರಶುರಾಮರ ಕ್ರೋದತನಿಸಿ, ಕಲಿಯುಗದ ಕಲ್ಕೀಯ ಕುರಿತು ಅರಿತ ಅದ್ಭುತ ಕ್ಷಣ. ಕಲ್ ಎಂದರೇ ನಾಳೆ ಮತ್ತು ಕೀ ಅಂದರೇ ರಕ್ಷಕ ಕಲ್ಕೀ ಎಂದರೆ ಭವಿಷ್ಯದ ರಕ್ಷಕ ಎಂದು ಅರ್ಥ. "ಕೀ" ರಕ್ಷಕ । "ಪ" ಸಂಭಧ ಸೂಚಕ ಪದ । "ಉಮಾ" ಸಂಸ್ಕೃತಿ, ಪ್ರಕೃತಿ, ಸ್ತ್ರೀ ಮತ್ತು ಲಕ್ಷ್ಮೀ ಎಂಬ ಸನಾತನ ಸೃಷ್ಠಿಚೈತನ್ಯ । ಕೀ ಪ ಉಮಾ ಎಂದರೇ ಸಂಸ್ಕೃತಿ ರಕ್ಷಕ ಎಂದು ಅರ್ಥ. ಸಂಸ್ಕೃತಿ, ಪ್ರಕೃತಿ ರಕ್ಷಕ ಕಲ್ಕೀ ಎಂದು ಅವನ ಬರುವಿಕೆಗೆ ಸೃಷ್ಟಿಯ ಒಂಬತ್ತನೇಯ ದಿಕ್ಕಿನ ಮಹೇಂದ್ರ ಪರ್ವತದಲ್ಲಿ ಶ್ರೀ ಪರಶುರಾಮರು ದ್ವಾಪರ ಯುಗದಿಂದಲು ಕಾಯುತ್ತಾ ಇದ್ದರು. ಇವರನ್ನು ನಾನು ಹೇಗೆ ತಲುಪಿದೆ ಎಂಬುದರ ಕುರಿತು ತಿಳಿಸುತ್ತೇನೆ ಬನ್ನಿ.



# ಮಾಹಿಸ್ಮತಿ

ನಾನು ಯಾರು? ನಾನು ಎಲ್ಲಿಂದ ಬಂದಿರುವೇ? ನನ್ನ ಮೂಲ ಆಂತರಿಕ ಶಕ್ತಿ ಎನು? ಹೀಗೆ ಹತ್ತು ಹಲವು ಪ್ರಶ್ನೆಗಳಿಂದ ನನ್ನ ಮನ ನನ್ನನ್ನು ಕಾಡಲು ಪ್ರಾರಂಭಿಸಿದಾಗ ನನ್ನ ವಯಸ್ಸು ನಾಲ್ಕು ವರ್ಷ. ಹೀಗೆ ಪ್ರಶ್ನೆ ಮೂಡಲು ಕಾರಣ ನನ್ನ ಮನೆಯ ಪರಿಸ್ಥಿತಿ. ಮನುವಿನ ವಂಶವಾದ ಸೂರ್ಯವಂಶದಲ್ಲಿ ಜನಿಸಿದ ಭಗೀರಥ, ಶ್ರೀ ರಾಮ, ಶ್ರೀ ರೇನುಕಾ, ಲವಕುಶರ ಮುಂತಾದ ಶ್ರೇಷ್ಠ ಭಾರತೀಯ ಸಂಸ್ಕೃತಿಯ ಜೀವಂತ ಸಾಕ್ಷಿಗಳ ರಕ್ತವನ್ನು ಹಂಚಿಕೂಂಡೇ ಉಪ್ಪಾರ ವಂಶದಲ್ಲಿ ಜನಿಸಿದ ನಾನು ಕಂಡ ನನ್ನ ತಂದೆಯ ತಾಯಿಯ ಅಜ್ಞಾನಕ್ಕೆ ಕಾರಣ ಹುಡುಕಲು ಪ್ರಾರಂಬಿಸಿದ ನನ್ನಮನಕ್ಕೆ ಉತ್ತರಗಳ ಸುರಿಮಳೆ ಸಿಕ್ಕ ಸ್ಥಳವೆ ಮಾಹಿಸ್ಮತಿ ಸಾಮ್ರಾಜ್ಯದ ಅಳಿವಿಗೆ ಕಾರಣವಾದ ರೇನುಕಾ ಸಾಮ್ರಾಜ್ಯ. ಈ ಸಾಮ್ರಾಜ್ಯದ ಪರಿಚಯ ನನ್ನ ಪ್ರಶೆಗಳಿಗೆ ಕಾರಣವಾದ ಅಧರ್ಮ ಮತ್ತು ಧರ್ಮಜ್ಞಾನ ಪ್ರಾಪ್ತಿಗೆ ಪ್ರೇರಕ. ಬನ್ನಿ ರೇನುಕಾಸಾಮ್ರಾಜ್ಯ & ಮಾಹಿಸ್ಮತಿಯ ಕುರಿತು ತಿಳಿಯೋನ.

ನನ್ನ ತಾಯಿ ತಂದೆ ಸೂರ್ಯವಂಶವಾದ ಉಪ್ಪಾರ ಜಾತಿಯಲ್ಲಿ ಜನಿಸಿದ್ದರಿಂದ ನಾನು ಸೂರ್ಯವಂಶಜ. ಸೌಗಂಧಪುರಿ ಇಂದಿನ ಸವದತ್ತಿ. ಈ ಸ್ಥಳದ ಹತ್ತಿರದ ಕರಿಕಟ್ಟಿ ನನ್ನ ತಂದೆಯ ಊರು. ಮಹೇಂದ್ರಪರ್ವತದ ತಪ್ಪಲಿನ ಸಂಬಲಮಾರ್ಗ ಪುರ ಇಂದಿನ ಸವಟಗಿ. ಇದು ನನ್ನ ತಾಯಿಯ ಊರು. ನನಗಾಗ ಮೂರುವರ್ಷ ವಯಸ್ಸು ನನ್ನ ತಾಯಿ, ನನ್ನ ತಂದೆಯ ಅಜ್ಞಾನಗಳಿಗೆ ನನ್ನನಗಲಿ ಇಹಲೋಕ ತ್ಯಜಿಸಿದಳು. ಅನಸೂಯಾಪುತ್ರನಾದ ನಾನು ಅನಾಥನಾದೆನು.

ನನ್ನ ತಾಯಿಯ ಮರಣದ ಅನಂತರ ನನ್ನನ್ನು ನನ್ನ ತಂದೆ ರೇನುಕಾ ಸಾಮ್ರಾಜ್ಯವಾದ ತೋರಗಲ್ಲ ಬಳಿಯ ಖಾನಪೇಟೆಗೆ ಕರೆದೋಯ್ದನು. ಆಗ ನನಗೆ ಅಂದಾಜು ಐದು ಅಥವಾ ಆರು ವರ್ಷವಯಸ್ಸು. ನಮ್ಮ ತಂದೆಯ ದ್ವಿತಿಯ ವಿವಾಹ ನಡೆಯಿತು. ನಾನು ಮತ್ತು ನನ್ನ ಸಹಚರರು ಗೋವುಗಳೊಂದಿಗೆ ಇರುತಿದ್ದೆವು. ನನಗೆ ಸಂತೋಷ ಅನಿಸುವುದು ತೋರಗಲ್ ಕೋಟೇಯ ಹತ್ತಿರ ಹೋದಾಗಲೆ. ನನ್ನೊಂದಿಗೆ ಇದ್ದ ನನ್ನ ಸ್ನೇಹಿತರು ತೋರಗಲ್ಲಿಗೆ ಓದಲು ಹೋಗುತಿದ್ದರು. ತೋರಗಲ್ಲಿನ ಹುಡುಗ ಸಂತೋಷ ಶಿಂಧೆ ನನ್ನ ಆತ್ಮೀಯ, ನನಗಿಂತ ವಯಸ್ಸಲ್ಲಿ ತುಂಬಾ ಹಿರಿಯ. ರಾಜವಂಶಜನಾಗಿದ್ದ. ಇವರು ನಮ್ಮ ಕುಟುಂಬಕ್ಕೆ ಸೇರಿದವರಾದ್ದರಿಂದ ನನ್ನ ಬಗ್ಗೆ ಅತೀವ ಅಕ್ಕರೆ ಇವನಿಗೆ. ಇವನು ನನ್ನನ್ನು ಶ್ರಾವನ ಮಾಸದ ಶನಿವಾರ ತೋರಗಲ್ಲ ಹನುಮದೇವರ ಗರಡಿಯಲ್ಲಿ ನನಗಾದ ಅವಮಾನ ನೋವನ್ನು ದೂರಮಾಡಲು ಹರಲಾಪುರ ವೆಂಕಟೇಶ್ವರ ದೇವಾಲಯಕ್ಕೆ ಕರೆದೋಯ್ದ.





# ಯಾರು ಈ ನಾಗಾಸಾಧು?

ಹರ್ಲಾಪುರ ವೆಂಕಟೇಶ್ವರ ದೇವಾಲಯ ರೇನುಕಾಸಾಮ್ರಾಜ್ಯದ ಪುರಾತನ ಕೇಂದ್ರವಾಗಿತ್ತು. ಇಲ್ಲಿಗೆ ಕರೆ ತಂದ ನನ್ನ ಅಣ್ಣ ಸಂತೋಷನಿಗೆ ನನ್ನ ಮನದಾಳದಿಂದ ಎಷ್ಟು ಕೃತಜ್ಞತೆ ತಿಳಿಸಿದರು ಕಡಿಮೆಯೆ. ನನಗೆ ಶ್ರೀ ಲಕ್ಷ್ಮೀನಾರಾಯನರ ಪರಿಚಯವಾದ ಸ್ಥಳ ಇದೆ. ಮತ್ಸ್ಯಾವತಾರದ ವರೆಗೆ ಹರಿಕಥೆ ಕೆಳುತ್ತ ನನಗೆ ಲಕ್ಷೀ ನಾರಾಯನರ ಕುರಿತು ಅಘಾದ ಪ್ರೇಮ ಉಂಟಾಯಿತು. ಮನೆಯಲ್ಲಿ ಎಷ್ಟೆ ಬೈಸಿಕೊಂಡರು ಹರಿಕಥೆ ತಪ್ಪುತಿರಲಿಲ್ಲ. ಕುರ್ಮಾವತಾರದ ಕುರಿತು ಅರಿಯ ಬೇಕಿದ್ದ ಸಮಯವದು. ನನ್ನನ್ನು ಸೂರ್ಯೋದಯದ ಮೊದಲೇ ಹೊಲಕ್ಕೆ ಕರೆದೊಯ್ದ ಕಾರಣ ಆದಿನ ನನಗೆ ಸಾಯಂಕಾಲವಾದರು ಹೊಗ ಬಹುದು ಎಂಬ ಆಸೆಯಿಂದ ಜೋಳದ ಕನಿಕೆಯನ್ನು ಚಕ್ಕಡಿಗೆ ಹೇರಿದೆನು. ಕಾಲಿನಲಿ ಎಷ್ಟೆ ನೋವಾದರು ಸಹಿಸಿಕೊಂಡೆ. ಹೂಲದಿಂದ ಮರಳುವಾಗ ಮನೆಗೆಹೋದರೆ ಹರಿಕಥೆಯಾಲಿಸಲು ಆಗದು ಎಂದು ಚಕ್ಕಡಿಯಿಂದ ಧುಮಿಕಿ ಹರ್ಲಾಪುರಕ್ಕೆ ಬಂದರೆ ಹರಿದೇವಾಲಯದಲ್ಲಿ ಮೌನವಾತಾವರನ. ಹರಿಕಥೆ ಹೆಳುತಿದ್ದ ಗುರುವರ್ಯರ ನಿಧನವಾಗಿತ್ತು.

ಅಘಾದವಾದ ನೋವು ಮನಹೊಕ್ಕಿತು. ಕನ್ನೀರ ಕಡಲಲ್ಲಿ ಮನೆಗೆ ಬಂದೆ. ನನ್ನನು ಬಂಡಿಯಲ್ಲಿ ಇರದಿದ್ದನ್ನು ನೋಡಿ ಘಾಭರಿಯಾದ ಮನೆಯವರು ಬಾಗಿಲಲ್ಲಿ ಕುಳಿತಿದ್ದರು. ನನ್ನನು ಕಂಡು ನನ್ನನು ನೇತುಹಾಕಿ ಹೊಡಿದು ಬೈದರು. ನನಗೆ ಇದರಪರಿವೇ ಇರದೆ ಲಕ್ಷ್ಮೀ ನಾರಾಯನರ ಮುಂದಿನ ಕಥೆಯ ಬಗ್ಗೆಯೇ ಯೋಚನೆ. ಗೋವುಗಳೊಂದಿಗೆ ಕಾಲಕಳೆಯುತ್ ಸಮಯಸಿಕ್ಕಾಗ ಭುತನಾಥ ದೇವಾಲಯಕ್ಕೆ ಹೋಗುತಿದ್ದೆ.

ಒಂದುದಿನ ನಾನು ಭುತನಾಥ ದೇವಾಲಯಕ್ಕೆ ಹೋಗಿದ್ದೆ. ಯಾರು ಬರದ ಈ ದೇವಾಲಯಕ್ಕೆ ಮೈಗೆ ಬುದಿ ಬಳೆದುಕೊಂಡ ಸಾಧುಗಳಿದ್ದದನ್ನು ಕಂಡುಭಯದಿಂದ ಸಂತೋಷನ ಬಳಿಹೋದೆ. ಈ ವಿಷಯವನ್ನು ಅವನಿಗೆ ತಿಳಿಸಿದಾಗ ಅವನು ಸರಿ ನೋಡೋನ ಬಾ ಎಂದು ನನ್ನನ್ನು ಅಲ್ಲಿಗೆ ಕರೆದೋಯ್ದ.

ದಾರಿಯಲ್ಲಿ ನಾನು ಅವನಿಗೆ ಹೇಳಿದೆ ಇವರು ಮಾಟ ಮಂತ್ರ ಮಾಡೋವ್ರಿರ ಬಹುದು ಅವರ ಬಳಿ ಹೋಗೋದು ಬೇಡ ಅಂದೆ. ನನ್ನಲ್ಲಿ ಭಯ. ಅವನು ಅವರ ಬಳಿಗೆ ಹೋದತಕ್ಷಣ ನಾನು ಹೇಳಿದ್ದನ್ನು ಯಥಾವತ್ತಾಗಿ ಹೇಳಿದ ನನಗೆ ಇನ್ನು ಭಯ ಅಧಿಕವಾಯ್ತು. ಆಗ ಸಾಧು ಒಬ್ಬರು ಕಂದ ನಮ್ಮ ಬಗ್ಗೆ ಸರೀಯಾದ ಮಾಹಿತಿ ಎಲ್ಲು ಸಿಗದ ಕಾರಣ ನೀನು ಅಂದು ಕೊಂಡಂತೆಯೆ ಎಲ್ಲರು ಮಿತ್ಯಾಳಿಂದ ಭ್ರಮಿತರಾಗಿದ್ದಾರೆ. ಎಂದರು.

ಆಗ ನಾನು ಅಧರ್ಮನ ಆತ್ಮೀಕ ಶಕ್ತಿ ಕಲಿಯುಗದಲ್ಲಿ ಹೆಚ್ಚಾಗಿದ್ದೇ ಇದಕ್ಕೆ ಕಾರಣ! ಗುರುಗಳೆ, ನಿವು ಯಾರು? ಹೀಗೇಕೆ ಇದ್ದೀರೀ? ಎಂದು ನಾನು ಕೇಳಿದೆ. ಆಗ ಅವರು ನೀನಾರು ಎಂದು ಕೈ ಹಿಡಿದು ನೋಡಿ ಸಂತೋಷದಿಂದ ಕೈ ಮುಗಿದು ತಮ್ಮ ಪಕ್ಕದಲ್ಲಿ ಕರೆದುಕೊಂಡು ಹೇಳ ತೊಡಗಿದರು. ಮಗು ಕೇಳು ನಾವು ನಾಗಾ ಸಾಧುಗಳು!. ನಮ್ಮ ಕುರಿತು ನಮ್ಮಸಾಧನೆಯ ತಂತ್ರಗಳ ಕುರಿತುಸಾಮಾನ್ಯವಾಗಿ ಯಾರಿಗು ಹೇಳುವುದಿಲ್ಲ ಆದರೇ ಇದನ್ನು ನಾಗಾಧಿಕ್ಷೆ ಪಡೆದವರಿಗೆ ಮಾತ್ರ ಹೇಳುತ್ತೆವೇ ಇರಲಿಕೇಳು ಕೇಳು.

ನಾಗ ಅನ್ನೋ ಶಬ್ದ ಕೇಳಿರುವೆ?, ಹಾವು. ಈ ನಾಗ ಸೃಷ್ಟಿ ದೈವಿನಿಧಿ ರಕ್ಷಣೇಗಾಗಿ ಇರುವುದಾಗಿದೆ. ಹಾಗೇ ಧರ್ಮದ ದಿವ್ಯವಿದ್ಯೇಗಳ ರಕ್ಷಣೇಗಾಗಿ ಸಂತಸತ್ಪುರುಶರಿಂದ ಸ್ಥಾಪಿತ ಮಾನವ ರಕ್ಷಕರ ಗುಂಪು ನಾಗಾಸಾಧು! ತಿಳಿಯಿತೆ ಅಂದರು.



## ಸಾಲಿಗ್ರಾಮ ಹುವಾಯಿತು!

ನಾಗ ಅಂದರೇ ರಕ್ಷಕ ಅಲ್ವಾ ಗುರುಗಳೆ ? ಎಂದು ನಾನು ಕೇಳಿದೆ. ಹು ಮಗು ರಕ್ಷಕನೆ, ನಮ್ಮ ಕರ್ತವ್ಯ ದಿವ್ಯ ದೈವೀ ವಿದ್ಯೆಗಳ ರಕ್ಷಣೆ ಎಂದರು. ಅದ್ಹೇಗೆ ರಕ್ಷಣೆ ಮಾಡ್ತಿರಿ ನೀವು ಎಂಬ ನನ್ನ ಪ್ರಶ್ನೆಗೆ ಅವರು " ಗುಪ್ತವಿದ್ಯೆಗಳನ್ನು ನಾವು ಗುರುಗಳಿಂದ ಕಲಿಯುತ್ತೆವೆ ಅವುಗಳನ್ನು ಸೂಕ್ತ ಶಿಶ್ಯನಿಗೆ ಬೋದಿಸಿ ಅವುಗಳನ್ನು ಅಧರ್ಮಕಾರ್ಯಗಳಿಗೆ ಉಪಯೋಗಿಸದಂತೆ ಮತ್ತೆ ಮುಂದಿನ ಪೀಳಿಗೆಗೆ ಸಿದ್ದಿಸಿಕೊಳ್ಳಲು ಅವಕಾಶ ಕಲ್ಪಿಸುತ್ತ ಸಾಗುತ್ತೇವೆ" ಎಂದರು.

ಸಾಮಾನ್ಯರು ಮತ್ತು ಅಸಮಾನ್ಯರು ಹಾಗೆ ದೈವೀಪುರುಶರು ಮುಂತಾದ ಗುಣಗಳಿರುವ ಮನುಜರ ಮನವ ಅರಿಯ ಬಲ್ಲ ಸಾಮರ್ಥ್ಯ ನನ್ನಲ್ಲಿ ಮೂಡಿತು. ಆ ಘಳಿಗೆಯಲ್ಲಿ ಆ ನಾಗಾಸಾಧು ನುಡಿಯಲಿಚ್ಚಿಸುವ ಮಾತುಗಳು ಮತ್ತೆ ನುಡಿದ ಮಾತುಗಳು ನನಗೆ ಹೂಸದೆನಿಸದೆ ಈ ಮೊದಲೇ ನನಗೆ ತಿಳಿದಿತ್ತು ಅನಿಸತೊಡಗಿತು. ಆಗ ಅವರು ಶಿವಪುಜೆಗೆ ನಮ್ಮನ್ನು ಜೊತೆಗೆಕರೆದು ಕೊಂಡು ಹೋದರು. ಅವರು ಹಿಮಾಲಯದತ್ತ ಹೊರಟಿದ್ದವರು, ದಕ್ಷಿಣದ ಈ ಭುತನಾಥ ದೇವಾಲಯದ ದರ್ಶನಕ್ಕೆ ಬಂದಿದ್ದರು.

ಪುಜೆ ಪ್ರಾರಂಭಕ್ಕು ಮುನ್ನ ಹೊಸ ನಾಗಾಸಾಧುಗಳಿಗೆ ಸಾಲಿಗ್ರಾಮ ಶಿಲೆಯನ್ನು ಕಟ್ಟಿದ್ದ ಕೊರಳಮಾಲೆಯನ್ನು ಅವರೊಂದಿಗೆ ನಮಗು ನೀಡಿದರು. ಪುಜೆ ಸರಾಗವಾಗಿ ನೆರವೇರಿತು. ನಂತರ ನಾಗಾಸಾಧುಗಳೊಂದಿಗೆ ನಮಗು ಸನಾತನ ಗ್ರಂಥಗಳ ಸುಜ್ಞಾನಾಮೃತ ದೊರಕಿತು ನಾನಂತು ಮುಖವಿಸ್ಮಿತನಾದೆ. ಇವರೊಟ್ಟಿಗೆ ಇರುವುದು ಅಕ್ಷರ ಅಬ್ಯಾಸ, ಸನಾತನ ಪುರಾಣ ಪ್ರವಚನಗಳನ್ನು ಆಲಿಸುವುದೊಂದೆ ನನ್ನ ಕೆಲಸವಾಗಿತ್ತು. ಬೆಳಿಗ್ಗೆ ಬೇಗನೆ ಎದ್ದು ಇವರ ಸನ್ನಿಧಿಗೆ ಬರುತಿದ್ದೆ. ಮನೆಯಲ್ಲಿ ಉಡಾಳನೆನಿಸಿದ್ದರು ಈ ಗುರುವರ್ಯರ ಬಾಯಲ್ಲಿ ಜಾನ ಎನಿಸಿಕೊಳುತಿದ್ದೆ ಎಂಬ ಹೆಮ್ಮೆ.

ಶ್ರಾವನದ ಕೂಣೆಯದಿನ ಯಜ್ಞಕುಂಡದ ಬಳಿ ನನ್ನನ್ನು ಕರೆದ ಶ್ರೀ ಮಾರತಿನಾಗಾ ಸಾಧು ಗುರುಗಳು ನನ್ನಕೊರಳಲ್ಲಿಯ ಮಾಲೆಯನ್ನು ತೆಗೆದರು. ಸಾಲಿಗ್ರಾಮ ಶಿಲೆ ಹೂವಾಗಿತ್ತು. ಅವರ ಪಾದ ಸ್ಪರ್ಶಿಸಿ ಆಶಿರ್ವಾದ ಪಡೆದು ಮನೆಗೆ ಮರಳಿದೆ.

ಪ್ರತಿದಿನದಂತೆ ನಾನು ಭುತನಾಥ ದೇವಾಲಯಕ್ಕೆ ಆ ದಿನ ಹೊಗಲಿಲ್ಲ ನನ್ನಲ್ಲಿ ಸಾಲಿಗ್ರಾಮ ಹೇಗೆ ಹುವಾಯಿತು ಎಂಬ ಪ್ರಶ್ನೆ ಕಾಡತೊಡಗಿತ್ತು. ಅದಕ್ಕೆ ಉತ್ತರ ಪಡೆಯಲು ಬೇಗನೆಹೋದೆ. ಆದರೆ ಅವರು ಅಲ್ಲಿಂದ ಹೊರಟು ಹೋಗಿದ್ದರು. ನಿರಾಶನಾದ ನನಗೆ ಸಂತೋಷ ಸಮಾಧಾನ ಮಾಡಿದ. ನನ್ನನ್ನು ಕೋಟೆಯ ಅರಮನೆಯ ಒಳಗೆ ಕರೆದೊಯ್ದು ಪುರಾತನ ಜೇಡಕಟ್ಟಿ ಭಯಾನಕವಾದ ಗುಹೆಯೋಳಗೆ ಕರೆದೊಯ್ದ. ಪುರಾತನ ತಾಳೆಗರಿಗಳ ಭಂಡಾರವೇ ಅಲ್ಲಿತ್ತು. ಚಿನ್ನಾಭರಣ ವಜ್ರ ವೈಢುರ್ವೇ ಅದರಲ್ಲಿ ಇತ್ತು. ಅವನಿಗೆ ಅದಾವುದೊ ವಸ್ತು ಬೇಕಿತ್ತಾದ್ದರಿಂದ ಅವನು ಹುಡುಕಾಡ ತೊಡಗಿದ. ನನಗೆ ತಾಳೆಗರಿಗಳ ಮಡಿಲಿನಲ್ಲಿ ಭಾರ್ಘವಪುರಾಣ ಗ್ರಂಥ ದೊರೆಯಿತು. ಅಂಜನಿಸುತ ,ವಿಕ್ರಮಚರಿತ ಮತ್ತು ಮಾನಿಕ್ಯಮಾಧವ ಗ್ರಂಥಗಳು ದೊರಕಿದವು ಅವು ಸಂಸ್ಕೃತ ಭಾಷೆಯಲ್ಲಿ ಇದ್ದವು. ಅವು ನಮ್ಮ ಸನಾತನ ಕೋಟೆಯ ರಾಜವಂಶದ ಅಮುಲ್ಯ ಇತಿಹಾಸ ಕೃತಿಗಳು.

ಭಾರ್ಘವಪುರಾಣ ಶ್ರೀ ಅಗಸ್ತ್ಯಮುನಿ ರಚಿಸಿದ ಗ್ರಥ. ಅಂಜನಿಸುತ ಸ್ವತಃ ಶ್ರೀ ಹನುಮನೇ ಬರೆದ ತನ್ನ ಆತ್ಮ ಚರಿತ್ರೆ. ಮಾನಿಕ್ಯಮಾಧವ ಶ್ರೀ ಕೃಷ್ಣನ ಆತ್ಮ ಚರಿತ್ರೇ ಬಲರಾಮನಿಂದ ರಚಿತ ಗ್ರಂಥ. ವಿಕ್ರಮಚರಿತ ರೇನುಕಾರಾಜ ವಂಶಜ ವಿಕ್ರಮ ರಚಿಸಿದ ಗ್ರಥ.



## ಮಾಹಿಸ್ಮತಿಯ ಅರಸ ವೀರಕಾರ್ತ್ಯಾರ್ಜುನ

ಸೌಗಂಧಿಪುರದ (ಸವದತ್ತಿ) ಮಾಹಿಸ್ಮತಿಯ ಅರಸ ವೀರಕಾರ್ತಾರ್ಜುನನ ಸಂಹಾರಕ್ಕೆ ಜನಿಸಿದ ಪರಶುರಾಮನ ಚರಿತ್ರೆ ಭಾರ್ಘವಪುರಾಣ. ಭಾರ್ಗವಪುರಾಣವನ್ನು ಅಗಸ್ಥ್ಯರು ಉತ್ತಮರೀತಿಯಲ್ಲಿ ಸ್ವತಃ ಪರಶುರಾಮನಿಂದಲೇ ಕೆಳಿತಿಳಿದು ರಚಿಸಿದ್ದಾರೆ. ಪರಶುರಾಮ  ಅಗಸ್ಯರ ಸಂವಾದ ಈ ಕೃತಿ.

ಸಂಪೂರ್ಣ ಓದಿದ ನನಗೆ ಯಲ್ಲಮ್ಮ ನಮ್ಮ ವಂಶದ ಮಗಳು ಎಂದು ತಿಳಿಯಿತು. ಜಮದಗ್ನಿಯ ಅಗ್ನಿಗುರುಕುಲದ ಕುರಿತು ಅರಿತೆ. ಕಲ್ಕೀಗೆ ಕೊನೆಯದಾಗಿ ಪರಶುರಾಮ ನೀಡಿದ ಸಂದೇಶಗಳ ಕುರಿತು ಓದಿ ಪ್ರಸನ್ನನಾದೆ. ನನ್ನ ಸಖಲ ಪ್ರಶ್ನೆಗಳಿಗೆ ಉತ್ತರ ಭಾರ್ಘವಪುರಾಣ. ಕಲಿಯುಗದ ಕರಾಳ ಮುಖಪರಿಚಯ ಮಾಡಿಸಿದ ಪರಶುರಾಮ ಇದರಿಂದ ಮುಕ್ತರಾಗುವ ಮಾರ್ಗದ ಕುರಿತು ಚರ್ಚಿಸಿದ್ದರು.

ಕಲಿಯುಗದಲ್ಲಿ ಯಾರು ೧೧೪ಆತ್ಮ ಚಕ್ರಗಳ ಜಾಗೃತಿ ಗೊಳಿಸಿಕೊಳ್ಳುವರೋ ಅವರೇ ಭವಿಷ್ಯದ ರಕ್ಷಕ ಭಗವಂತ ।ಕಲ್ ಕೀ| ಆಗಿ ಸಂಸ್ಕೃತಿ ಪ್ರಕೃತಿಯ ರಕ್ಷಕನಾಗುವನು|ಕೀ ಪ ಉಮಾ|. ಎಂದು ಪರಶುರಾಮರು ಅಗಸ್ಯರಿಗೆ ಹೇಳಿದಾಗ ಸಂತೋಷ ಮತ್ತು ಪ್ರಶ್ನಾರ್ಥಕವಾಗಿ ಅಗಸ್ಥ್ಯಮುನಿ " ಕಲಿಯುಗದಲ್ಲಿ ಅಧರ್ಮನ ಆಳ್ವಿಕೆಯಿರುವುದು, ಈ ಅಧರ್ಮನ ಬಂಧನದಿಂದ ಮನುಜರು ಪಾರಾಗುವುದೇ ಖಠಿಣ ಅಂತಹುದರಲ್ಲಿ ೧೧೪ಆತ್ಮಚಕ್ರ ಜಾಗೃತಿ ಸುಲಭವೇ ಅಲ್ಲ". ಎಂದರು. ಇದಕ್ಕೆ ಉತ್ತರವಾಗಿ "ಮಾಹಿಸ್ಮತಿಯ ಪಶ್ಚಿಮಕ್ಕೆ ಎತ್ತರದ ಪರ್ವತದಲ್ಲಿ ಅಗ್ನಿಗುರುಕುಲ ಇರುವುದು.  ಇಲ್ಲಿ ಪವಿತ್ರ ಜಲಝುರಿಯಿದ್ದು ಕಲಿಯುಗದಲಿ ನಶಿಸುವುದು.ಈ ಸ್ಥಳದಲ್ಲೆ ಮಹೇಂದ್ರಪರ್ವತದ ೯ನೇ ದಿಕ್ಕಿನ ಪ್ರವೇಶ ಮಾರ್ಗವಿದೆ.

ಆ ಮಾರ್ಗ ತ್ರಿನೇತ್ರ ಜಾಗೃತಿಯಾದಾಗ ಗೋಚರಿಸುತ್ತದೆ ಮತ್ತು ಈ ಸ್ಥಳವೇ ಶಂಬಲ ಪ್ರವೇಶವಪುರ". ಎಂದರು. ಅಗಸ್ಯಮುನಿ "ಈ ಕುರಿತು ಕಲಿಯುಗದಲ್ಲಿ ಕಲ್ಕಿಗೆ ಹೇಗೆ ಮಾಹಿತಿ ದೊರಕುವುದು?" ಎಂದುಕೇಳಿದಾಗ ಅಗ್ನಿಗುರುಕುಲದ ಮೂಲಕ ಎಂದು ಪರಶುರಾಮ ಹೇಳಿದರು.

ಅಗ್ನಿಗುರುಕುಲದ ಕುರಿತು ಭಾರ್ಗವಪ್ರಭು ಮಾಹಿತಿ ನೀಡಿ ಎಂದ ಮಾತಿಗೆ ಪರಶುರಾಮ "ನಮ್ಮ ತಂದೆ ಜಮದಗ್ನಿ ತನ್ನಬಾಲ್ಯ ಯವ್ವನವನ್ನು ಕೀಪುಮಾಗಾಗೆ ಮೀಸಲಿಟ್ಟ ಮಹಾಸೃಷ್ಟಿ ಚೈತನ್ಯಸ್ವರೂಪಿ ಬ್ರಾಹ್ಮಣ. ನನ್ನತಾಯಿ ರೇಣುಕಾ ಸೂರ್ಯವಂಶಜೆ. ಇವರ ಪುತ್ರನಾದ ನಾನು ಜಮದಗ್ನಿಯ ಕೀಪುಮಾ ಭದ್ರತೆಗೆ ನನ್ನನ್ನು ನನ್ನಸಹೋದರರನ್ನು ಹಾಗೆ ಗುರುಕುಲ ವ್ರಥದಾರಿಗಳಿಗೆ ಅನುಕೂಲವಾಗಲಿ ಎಂದು ೯ನೇ ದಿಕ್ಕಿನಲ್ಲಿ ಪ್ರವೇಶಿಸಲು ಅನಕೂಲವಾಗುವ ಸ್ಥಳಗಳು ಎಳು ಅವು ಎಳರಲ್ಲು ಮಾಹಿಸ್ಮತಿಯ ಪಶ್ಚಿಮದ ಮಾರ್ಗವನ್ನು ನನ್ನತಂದೆ ನನಗೋಸ್ಕರ ನಿರ್ಮಿಸಿದ್ದರು. ಈ ಸ್ಥಳವೇ ಮಹೇಂದ್ರಪರ್ವತಕ್ಕೆ ಇರುವ ಆದ್ಯಾತ್ಮಿಕ ಮಾರ್ಗ. ಎಂದು ಸವಿಸ್ತಾರವಾಗಿ ಹೇಳಿದರು.

ಪ್ರಭು ಕಲ್ಕಿ ಈ ಮಾರ್ಗದಲ್ಲಿ ಬಂದು ನಿಮ್ಮನ್ನು ಸೇರುವುದು ಕಲಿಯುಗದಲ್ಲಿ ಅಸಾದ್ಯ. ಪರಶುರಾಮ ಅದರಕುರಿತು ನನ್ನಲ್ಲು ಕುತೊಹಲವಿದೆ. ನನ್ನ ತಂದೆ ನನ್ನನ್ನು ಚುರಂಜೀವಿಯನ್ನಾಗಿ ಪರಿವರ್ತಿಸಿದ ಈ ಮಹೇಂದ್ರ ಪರ್ವತದ ಈ ಅಗ್ನಿಗುರುಕುಲ ಅವನನ್ನು ಪರಿವರ್ತಿಸುವುದು. ಅವನಿಗೆ ಈ ಗುರುಕುಲಕ್ಕೆ ಮಾರ್ಗಯಾರು ತೋರುವರು ಎಂದರು ಅಗಸ್ಥ್ಯಮುನಿ. ಹನುಮಂತ ಈ ಕಾರ್ಯಮಾಡುವನು. ಆಗ ಅಗಸ್ಯಮುನಿ ಹಾ! ಎಂದು ಚಕಿತರಾದರು. ನಾನು ಈ ಭೊಮಿಯನ್ನು ವಾಮನಾವತಾರದ ನನ್ನ ತಂದೆತಾಯಿಗೆ ದಾನಮಾಡಿರುವಕಾರಣ ನನಗೆ  ೯ನೇದಿಕ್ಕಲಿ ಇರಲು ಮಾತ್ರ ಅವಕಾಶ ಇದೆ ಆಕಾರಣ ಹನುಮನೆ ಅವನಿಗೆ ಮಾರ್ಗತೋರಬಲ್ಲ. ಎಂದರು ಅಗಸ್ಯಮುನಿ ನಾನು ಅವನಿಗೆ ಸಹಾಯಮಾಡುವೆ ಎಂದರು. ಆ ಮಾತಿನ ಫಲವೇ ಈ ಭಾರ್ಗವಪುರಾಣ ಗ್ರಂಥ.





# ಅಗ್ನಿಗುರುಕುಲ ಮರು ನಿರ್ಮಾಣ

ಭಾರ್ಗವಪುರಾಣವನ್ನು ಸಂಪೂರ್ಣ ಗೋಳಿಸಿ ರೇಣುಕಾಮಾತೆಗೆ ಅಗಸ್ತ್ಯರು ಹಸ್ತಾಂತರಿಸಿದರು. ಜಮದಗ್ನಿ ಪ್ರಸನ್ನತೆಯಿಂದ ಓದಿ ತನ್ನ ನಾಲ್ಕು ಮಕ್ಕಳ ಶಿಕ್ಷಣ ಪೂರ್ಣಗೊಂಡ ಕಾರಣ ಅವರನ್ನು ರೇನುಕಾ ರಾಜನಿಗೆ ಒಪ್ಪಿಸುವುದರೊಂದಿಗೆ ಈ ಗ್ರಂಥವನ್ನು ಕಲಿಯುಗದ ವರೆಗೂ ಜೋಪಾನಮಾಡ ಬೇಕೆಂದು ಹೇಳಿದ್ದರು. ಹೀಗೆ ರೇನುಕಾ ರಾಜನ ವಂಶ ಮುಂದುವರೆಯಿತು. ರೇನುಕಾರಾಜನ ಆಸ್ಥಾನಕ್ಕೆ ಜಮದಗ್ನಿಯ ಹಿರಿಮಗ ರಾಜನಾದ. ಈ ಸಂಸ್ಥಾನದಲ್ಲಿ ಈ ಗ್ರಂಥಕ್ಕೆ ಅತೀವ ಭಕ್ತಿಪ್ರೀತಿಯನ್ನು ನೀಡಿ ಗೌರವಿಸಿ ಪೂಜಿಸುತ್ತಿದ್ದರು. ಈ ಗ್ರಂಥದ ಕೆಲ ತಾಳೆಪ್ರತಿಗಳನ್ನು ಅಗಸ್ತ್ಯರು ಯಥಾವತ್ತಾಗಿ ನಕಲಿಸಿ ಕಲ್ಕಿಗೆ ಸಾಮಾನ್ಯ ಶಸ್ತ್ರವಿದ್ಯೆಗೆ ಅನುವಾಗಲು ಗುರುಕುಲ ವೃಂದವನ್ನು ಸೃಷ್ಟಿಸಿದರು. ಇದರ ಫಲವೇ ಇಂದಿನ ಕೇರಳದ ಕಲರಿಪಯಟ್ಟು ಗುರುಕುಲಗಳು. ನಾನು ಸಂತೋಷನಿಗೆ ನೀನು ಹುಡುಕುತಿರುವುದು ಸಿಕ್ಕಿತೆ ಎಂದೆನು ಅವನು ಇನ್ನು ಇಲ್ಲ ಎಂದನು. ನನ್ನ ಓದುವ ಕೆಲಸ ಮುಂದುವರೆಯಿತು.

ಅಂಜನಿಸುತ ತಾಳೆ ಪ್ರತಿಯು ಪುರಾತನವಾಗಿದ್ದು ಧಾರುನ ಸ್ಥಿತಿಯಲ್ಲಿ ಇತ್ತು.
"ಅಂಜನಿಸುತ । ಕೇಸರಿ ನಂದನ||
ಕಿಷ್ಕಿಂದಾಪುರ ವಾಸಿ| ಆಂಜನೇಯನಿಂದ ಕಲ್ಕಿಗೆ ಪ್ರಣಾಮ||" ।೦೧।

"ಪ್ರಭು ನಿಮ್ಮಿಂದ ಮಾತ್ರ ಈ ಗ್ರಂಥ ಓದಲು ಸಾಧ್ಯ|
ನಿಮಗಾಗಿ ನಿಮ್ಮ ಭಕ್ತನ ಕೊಡುಗೆ||
ಪ್ರಭು ನಿಮ್ಮನ್ನು ರಾಮಾವತಾರದಲ್ಲಿ ನಾನು ಸೇರಿದ್ದಕ್ಕೆ ಕಾರಣ । ಕೊನೇಯಾವತಾರಕ್ಕೆ ಮಾರ್ಗದರ್ಶನ ತೋರಲು|| ।೦೨।

"ಸಂಪೂರ್ಣ ಆತ್ಮಜಾಗೃತಿಗೆ । ಮಹೇಂದ್ರಪರ್ವತ ||
ಪರಶುರಾಮರಿಂದ ರಕ್ಷಿತ| ಧರ್ಮಪಾಲಕನಿಗೆ ಪ್ರವೇಶ ನಿಶ್ಚಿತ|| ।೧೦೬।

ಒಟ್ಟು ೧೦೮ ತಾಳೆಗರಿಯ ಜ್ಞಾನ, ಅಮೃತಕ್ಕೆ ಸಮಾನವಾಗಿತ್ತು. ಅರ್ಧದಿನ ಕಳೆದ ನಮಗೆ ಹಸಿವಿನ ಅರಿವಾಗಲೇ ಇಲ್ಲ. ಅತೀ ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳು ಆತ್ಮದ ಕುರಿತು ಈ ಗ್ರಂಥದಲ್ಲಿ ಇವೆ.

ಇದಾದ ನಂತರ ನಾನು ಶ್ರೀಕೃಷ್ಣನ ಸಹೋದರ ಬಲರಾಮ ರಚಿಸಿದ 'ಮಾನಿಕ್ಯ ಮಾಧವ' ತಾಳೆಪ್ರತಿ ಮುಟ್ಟಿದ ತಕ್ಷಣ ಮೈಯಲ್ಲ ವಿದ್ಯುತ್ ಸಂಚರಿಸಿದಂತಾಯಿತು. ಈ ತಾಳೆ ಪ್ರತಿಯು ೧೧ಳ ಪ್ರತಿಗಳನ್ನು ಒಳಗೊಂಡಿದೆ. ಬಲರಾಮ ತನ್ನ ನೋವನ್ನು ಕೀಪುಮಾ ಕಾರ್ಯವನ್ನು, ಕೃಷ್ಣನ ಪೂರ್ಣ ಸತ್ಯವನ್ನು ತೆರೆದಿಡುವ ಗ್ರಂಥ.
"ನಾನು ರಾಮ, ಬಲರಾಮ| ಕೃಷ್ಣನ ಹಿರಿಯಣ್ಣ|| ಕೃಷ್ಣ ಇಂದು ಇದ್ದು ಇರದ ಸ್ಥಿತಿಗೆ ಕಲಿಯೇ ಕಾರಣ| ಕಲ್ಕೀ ನಿನ್ನಿಂದಲೆ ಕೃಷ್ಣನಿಗೆ ಮುಕ್ತಿ|| (ಶ್ಲೋಕ ೦೨)

"ಕೃಷ್ಣನನಗೆ ಹೇಳಿದ್ದ ಮಹೇಂದ್ರ ಪರ್ವತದ ಮೂಲಕ ಸಂಪೂರ್ಣ ಆತ್ಮಶಕ್ತಿ ಪಡೆಯ ಬಹುದೆಂದು| ನಾನು ಸಫಲನಾದೆ || ಕಲ್ಕೀ ನಿನಗಾಗಿ ದ್ವಾರಕೆಯ ವಿರುದ್ಧ ಪಡುವನ ದಿಕ್ಕಿಗೆ ಕೃಷ್ಣನ ಪರಬ್ರಹ್ಮತೇಜ ಕಾಯುತ್ತಲಿದೆ| ಆವಾಹಿಸು|| (ಸ್ಲೋಕ ೯೫)

ಹೀಗೇ ೧೧ಳಲ್ಲು ಪ್ರತಿಶ್ಲೋಕ ಕಲ್ಕಿಯ ಬರುವಿಕೆಗೆ ಕಾಯುತ್ತಲಿರುವ ಬಲರಾಮನ ಕೈಯಿಂದ ಬರೆಯಲ್ಪಟ್ಟಿವೆ.

ಅತ್ಯಂತ ಕುತೋಹಲದಿಂದ ವಿಕ್ರಮಚರಿತ ಪುಸ್ತಕವನ್ನು ಕಂಡೆನು. ಇದು ದಪ್ಪನೆಯ ಪೇಜನ್ನು ಸುಟ್ಟ ರೀತಿಯ ಅಕ್ಷರದ ಮೂಲಕ ಬರೆಯಲಾಗಿತ್ತು. ಅತ್ಯಂತ ಸ್ಪಷ್ಟವಾಗಿ ಬರೆಯಲ್ಪಟ್ಟಿತ್ತು ವೇಗವಾಗಿ ನನಗೆ ಅರ್ಥವಾಯಿತು.

"ರೇನುಕಾಸಾಮ್ರಾಜ್ಯದ ರಾಜಕುಮಾರ ದಾಮೋದರನಿಗೆ ಬಾಲ್ಯದಲ್ಲೆ ಭಾರ್ಗವಪುರಾಣದ ಶಿಕ್ಷಣದೊರಕಿತ್ತು. ಅಗ್ನಿಗುರುಕುಲ ಮರು ಸ್ಥಾಪನೆ ಇವರ ಕನಸಾಗಿತ್ತು. ೨೧ ಜನರಿಗೆ ಭಾರ್ಘವಪುರಾಣದ ಶಿಕ್ಷನವನ್ನು ನೀಡಿ ತಯಾರಿಸಿದ್ದರು. ಇವರು ಅಪ್ರತಿಮ ಯೋಧರಾಗಿದ್ದರು. ಸಹಿಸದ ದಾಮುವಿನ ಅಣ್ಣ ಇವರಲ್ಲಿ ೨೦ಜನರರನ್ನು ಕೊಂದು ಹಾಕಿದ. ದಾಮು ಮತ್ತು ೨೧ನೇಯದವ ಮರಳಿದಾಗ ಕಲ್ಲಿನ ಕೋಟೆಯ ಉದ್ದಕ್ಕು ಮಿಕ್ಕವರ ಶರೀರಾಂಗಗಳನ್ನು ತೋರಣ ಕಟ್ಟಿದ್ದಕ್ಕೆ ಕುಪಿತನಾಗಿ ತನ್ನ ಅಣ್ಣನನ್ನು ಸಂಹರಿಸಿ ಭಾರ್ಘವಪುರಾಣ, ಅಂಜನಿಸುತ, ಮಾನಿಕ್ಯಮಾಧವ, ವೇದಪುರಾಣಗಳ ಭಂಡಾರವನ್ನು ನೆಲಮಾಳಿಗೆಯಲ್ಲಿ ನಾಗಬಂಧನದಲ್ಲಿ ಇಟ್ಟು ರಾಜ್ಯವನ್ನು ತೊರೆದು ಈಶಾನ್ಯದತ್ತ ಹೊರಟು ಹೋದನು.

೨೧ನೇಯದವನೇ ನನ್ನತಂದೆ ರೇಣುಕಾರ್ಜುನ ,ದಾಮೋದರ ದೊಡ್ಡಪ್ಪನ ಕನಸು ನನಸು ಮಾಡಲು ಅಗ್ನಿಗುರುಕುಲ ಮರು ಪ್ರಾರಂಬಿಸಿ ನನಗೆ ಶಿಕ್ಷಣ ನೀಡಿದರು. ದೊಡಪ್ಪನೆಲ್ಲಿ ಎಂದು ನಾನು ಕೆಳಿದರೆ ಈಶಾನ್ಯದೇಶದಲ್ಲಿ ಗುರುಕುಲ ತೆರೆದಿರುವರು ಎಂದಿದ್ದರು. ವೇದಿಕ ಅನುಸರಿಸದ ಅಧರ್ಮನ ಕುಲಭಾಂದವರು ಮೋಸದಿಂದ ನನ್ನತಂದೆಯನ್ನು ಕೊಂದು ಗುರುಕುಲ ನಷ್ಟ ಮಾಡಿದರು. ಅವರಿಂದ ತಪ್ಪಿಸಿ ಈ ಗ್ರಂಥವನ್ನು ನಾಗಬಂಧನದಲ್ಲಿ ಇಡಲಿದ್ದೆನೆ. ಎಂಬುದು ಒಳಾರ್ಥವಾಗಿತ್ತು



ಅಧ್ಯಾಯ

2

# ಸ್ವಯಂ ಸೇವಕ ವ್ರತ

ವಿಕ್ರಮಚರಿತ ಗ್ರಂಥದಲ್ಲಿ ವಿಕ್ರಮ ತನ್ನ ತಂದೆ ಹೇಗೆ ಈ ವಿದ್ಯೆಯ ಉಳಿವಿಗೆ ಹೋರಾಡಿ ಮಡಿದರು ಎಂದು ಉಲ್ಲೇಖಿಸಿ ನನ್ನತಂದೆಯ ಪರದಾಟ ನನಗೆ ಅರ್ಥವಾಗುತಿಲ್ಲ. ನನಗೆ ಈ ವಿದ್ಯೆಯಲ್ಲಿ ವಿಜಯಿಯಾಗಲು ತುಂಬಾ ಒತ್ತಡ ಹೇರಿ ನನ್ನನ್ನು ಹಗಲಿರುಳು ಅಧ್ಯಯನದಲ್ಲಿ ತೂಡಗಿಸಿರುವುದು ನನಗೆ ತಡೆಯಲಾರದ ಸಂಕಟ ಎಂದು ಹೇಳಿದ್ದಾನೆ. ಇದಕ್ಕೆ ಕಾರಣ ಅವನೇನಾದರು ಈ ವಿದ್ಯೆಯನ್ನು ವಿಕ್ರಮನಿಗೆ ಧಾರೆ ಎರೆಯದೆ ತೀರಿಹೋದರೆ ಈ ವಿದ್ಯೆಯ ನಷ್ಟ ಕಲ್ಕಿಯ ಶಿಕ್ಷಣ ಅಪೂರ್ಣವಾಗುವುದು ಎಂಬುದು ಪ್ರಮುಖ ಕಾರಣ. ಅಗ್ನೀಗುರುಕುಲ ಸ್ಥಾಪನೆ ತನ್ನ ಮಗನಿಂದ ಸಾಧ್ಯವಾಗಲಿ ಎಂದು ಪರದಾಡಿದ್ದ ಕೊನೆಯಲ್ಲಿ ದುಷ್ಟರಿಂದ ವಿಕ್ರಮನ ಪಾರುಮಾಡಲು ಹೋಗಿ ಮರಣ ಹೊಂದಿದನು.

ತಂದೆಯ ಸಾವಿನ ಪ್ರತಿಕಾರ ತೀರಿಸಿಲು ವಿಕ್ರಮನ ಅಧ್ಯಯನ ತೀವ್ರವಾಯಿತು. ಮಹೇಂದ್ರ ಪರ್ವತ ಪ್ರವೇಶ ಪಡೆಯುವ ಮುಂಚೆ ಮರಳದಿದ್ದರೆ ಎಂಬ ಪ್ರಶ್ನೆ ಮೂಡಿ ಈ ಗ್ರಂಥವನ್ನು ಬರೆಯಲು ಮುಂದಾಗಿರುವ ಕುರಿತು ಉಲ್ಲೇಖಿಸಿದ್ದಾನೆ. "ನನ್ನ ರೇನುಕಾರಾಜವಂಶಜ ಈ ಗ್ರಂಥ ನಿನಗಾಗಿ ಬರೆಯಲ್ಪಟ್ಟಿದೆ. ಓದಿ ಸುಮ್ಮನಾಗ ಬೇಡ ನನ್ನಿಂದ ಅಗ್ನಿಗುರುಕುಲ ನಿರ್ಮಿಸಲು ಸಾಧ್ಯವಾಗಿರದ ಕಾರಣಕ್ಕೆ ನಿನು ಈ ಗ್ರಂಥ ಓದುತಿರುವೆ. ನಿನಗೆ ಅನುಕೂಲವಾಗಲಿ ಎಂದು ಈ ಭಾರ್ಘವಪುರಾಣ, ಅಂಜನಿಸುತ, ಮಾನಿಕ್ಯಮಾಧವ ತಾಳೆಗ್ರಂಥಗಳನ್ನು ಒಂದೇ ಸ್ಥಳದಲ್ಲಿ ಇಡುವೆನು. ನಾಗಬಂಧನ ಅತೀ ಭಯಾಣಕ ಬಂದನ ಇದನ್ನು ದಾಟುವುದು ಅಸಾಧ್ಯ ದಾಟಿ ಈ ಗ್ರಂತಗಳ ಓದಿದ ನೀನು ನಾಗಸಿದ್ದಿ ಪಡೆದಿರುವೆ. ನಾನು ಪುರಾತನ ನಾಗಮಣಿಯನ್ನು ಮಾಹಿಸ್ಮತಿ ಎದುರಿನ ಎತ್ತರದ ಪರಶುರಾಮ ತಪೋಭೂಮಿ ಮಹೇಂದ್ರಪರ್ವತದಲ್ಲಿ ಇಟ್ಟಿರುವೆ ತ್ರೀನೇತ್ರ ಜಾಗೃತಿಯೋಂದಿಗೆ ನಿನಗೆ ಅದು ಲಭಿಸುವುದು, ಅದು ನಿನಗೆ ಲಬ್ಯವಾದರೆ, ನಿನು ಈ ಅಗ್ನಿಗುರುಕುಲ ಮರುಸ್ಥಾಪಿಸಿಯೇ ಮಹೇಂದ್ರಪರ್ವತದ ಒಂಬತ್ತನೇಯ ದಿಕ್ಕನ್ನು ಪ್ರವೇಶಿಸು . ದಯಮಾಡಿ ನಿನು ಈ ಗ್ರಂಥಗಳನ್ನು ನಾಶಮಾಡ ಬೇಡ. ನಿನ್ನಿಂದ ಮಾತ್ರ ಈ ಗ್ರಂಥ ರಕ್ಷಿಸಲ್ಪಡುವುದು. ಎಂದು ಬರೆದ ಕರುಣಾಜನಕ ಉಲ್ಲೇಖಗಳನ್ನು ಓದಿ ನನ್ನ ಮನ ನೊಂದಿತು. ಸಂತೋಷ ನಡೆ ಎಂದಾಗ ನಾನು ವಾಸ್ತವಕ್ಕೆ ಬಂದೆ.

ವಿಕ್ರಮಚರಿತ ಗ್ರಂಥದಲ್ಲಿ ವಿಕ್ರಮ ತನ್ನ ತಂದೆ ಹೇಗೆ ಈ ವಿದ್ಯೆಯ ಉಳಿವಿಗೆ ಹೋರಾಡಿ ಮಡಿದರು ಎಂದು ಉಲ್ಲೇಖಿಸಿ ನನ್ನತಂದೆಯ ಪರದಾಟ ನನಗೆ ಅರ್ಥವಾಗುತಿಲ್ಲ. ನನಗೆ ಈ ವಿದ್ಯೆಯಲ್ಲಿ ವಿಜಯಿಯಾಗಲು ತುಂಬಾ ಒತ್ತಡ ಹೇರಿ ನನ್ನನ್ನು ಹಗಲಿರುಳು ಅದ್ಯಯನದಲ್ಲಿ ತೂಡಗಿಸಿರುವುದು ನನಗೆ ತಡೆಯಲಾರದ ಸಂಕಟ ಎಂದು ಹೇಳಿದ್ದಾನೆ. ಇದಕ್ಕೆ ಕಾರಣ ಅವನೆನಾದರು ಈ ವಿದ್ಯೆಯನ್ನು ವಿಕ್ರಮನಿಗೆ ಧಾರೆ ಎರೆಯದೆ ತೀರಿಹೋದರೆ ಈ ವಿದ್ಯೆಯ ನಷ್ಟ ಕಲ್ಕಿಯ ಶಿಕ್ಷಣ ಅಪೂರ್ಣವಾಗುವುದು ಎಂಬುದು ಪ್ರಮುಖ ಕಾರಣ.
ಅಗ್ನೀಗುರುಕುಲ ಸ್ಥಾಪನೆ ತನ್ನ ಮಗನಿಂದ ಸಾಧ್ಯವಾಗಲಿ ಎಂದು ಪರದಾಡಿದ್ದ ಕೊನೆಯಲ್ಲಿ ದುಷ್ಟರಿಂದ ವಿಕ್ರಮನ ಪಾರುಮಾಡಲು ಹೋಗಿ ಮರಣ ಹೊಂದಿದನು.

ತಂದೆಯ ಸಾವಿನ ಪ್ರತಿಕಾರ ತೀರಿಸಿಲು ವಿಕ್ರಮನ ಅದ್ಯಯನ ತೀವ್ರವಾಯಿತು. ಮಹೇಂದ್ರ ಪರ್ವತ ಪ್ರವೇಶ ಪಡೆಯುವ ಮುಂಚೆ ಮರಳದಿದ್ದರೆ ಎಂಬ ಪ್ರಶ್ನೆ ಮೂಡಿ ಈ ಗ್ರಂಥವನ್ನು ಬರೆಯಲು ಮುಂದಾಗಿರುವ ಕುರಿತು ಉಲ್ಲೇಖಿಸಿದ್ದಾನೆ. "ನನ್ನ ರೇನುಕಾರಾಜವಂಶಜ ಈ ಗ್ರಂಥ ನಿನಗಾಗಿ ಬರೆಯಲ್ಪಟ್ಟಿದೆ. ಓದಿ ಸುಮ್ಮನಾಗ ಬೇಡ ನನ್ನಿಂದ ಅಗ್ನಿಗುರುಕುಲ ನಿರ್ಮಿಸಲು ಸಾಧ್ಯವಾಗಿರದ ಕಾರಣಕ್ಕೆ ನಿನು ಈ ಗ್ರಂಥ ಓದುತಿರುವೆ. ನಿನಗೆ ಅನುಕೂಲವಾಗಲಿ ಎಂದು ಈ ಭಾರ್ಘವಪುರಾಣ, ಅಂಜನಿಸುತ, ಮಾನಿಕ್ಯಮಾಧವ ತಾಳೆಗ್ರಂಥಗಳನ್ನು ಒಂದೇ ಸ್ಥಳದಲ್ಲಿ ಇಡುವೆನು. ನಾಗಬಂಧನ ಅತೀ ಭಯಾಣಕ ಬಂದನ ಇದನ್ನು ದಾಟುವುದು ಅಸಾಧ್ಯ ದಾಟಿ ಈ ಗ್ರಂತಗಳ ಓದಿದ ನೀನು ನಾಗಸಿದ್ಧಿ ಪಡೆದಿರುವೆ. ನಾನು ಪುರಾತನ ನಾಗಮಣಿಯನ್ನು ಮಾಹಿಸ್ಮತಿ ಎದುರಿನ ಎತ್ತರದ ಪರಶುರಾಮ ತಪೋಭೂಮಿ ಮಹೇಂದ್ರಪರ್ವತದಲ್ಲಿ ಇಟ್ಟಿರುವೆ ತ್ರೀನೇತ್ರ ಜಾಗೃತಿಯೋಂದಿಗೆ ನಿನಗೆ ಅದು ಲಭಿಸುವುದು, ಅದು ನಿನಗೆ ಲಬ್ಯವಾದರೆ, ನಿನು ಈ ಅಗ್ನಿಗುರುಕುಲ ಮರುಸ್ಥಾಪಿಸಿಯೇ ಮಹೇಂದ್ರಪರ್ವತದ ಒಂಬತ್ತನೇಯ ದಿಕ್ಕನ್ನು ಪ್ರವೇಶಿಸು . ದಯಮಾಡಿ ನಿನು ಈ ಗ್ರಂಥಗಳನ್ನು ನಾಶಮಾಡ ಬೇಡ. ನಿನ್ನಿಂದ ಮಾತ್ರ ಈ ಗ್ರಂಥ ರಕ್ಷಿಸಲ್ಪಡುವುದು. ಎಂದು ಬರೆದ ಕರುಣಾಜನಕ ಉಲ್ಲೇಖಗಳನ್ನು ಓದಿ ನನ್ನ ಮನ ನೊಂದಿತು. ಸಂತೋಷ ನಡೆ ಎಂದಾಗ ನಾನು ವಾಸ್ತವಕ್ಕೆ ಬಂದೆ.

ಮನೆಗೆ ಮರಳಿದ ಮೇಲೆ ನನ್ನ ಗುರಿ ಮಹೇಂದ್ರ ಪರ್ವತದ ಅಣ್ವೇಶನೆ ಯಾಗಿತ್ತು. ಇದಾದ ನಂತರ ಕೆಲಧುರ್ಗಟನೆಗಳು ನಡೆದವು. ನನ್ನ ತಂದೆ ನನ್ನನ್ನು ಕರೀಕಟ್ಟಿಗೆ ಕರೆದೋಯ್ದ ನಾನು ಯಲ್ಲಮ್ಮನ ಗುಡ್ಡವನ್ನು ಕಂಡು ನನ್ನ ತಂದೆಯಿಂದ ತಪ್ಪಿಸಿ ಕೊಂಡು ಅಲ್ಲಿಂದ ನನ್ನ ಅಜ್ಜಿಯ ಊರು ಸವಟಗಿಗೆ ಬಂದೆನು. ಕಾರಣ ಈ ಊರು ಪಶ್ಚಿಮಕ್ಕೆ ಇರುವುದು. ಎತ್ತರದ ಬೆಟ್ಟದ ಹುಡುಕಾಟ ಪ್ರಾರಂಭವಾಯಿತು.

ರಾಜಹಂಸಘಡ ಅತೀ ಎತ್ತರದಲ್ಲಿ ಇರುವುದು ನನ್ನ ಗಮನಕ್ಕೆ ಬಂದಿತು. ಅಲ್ಲಿಗೆ ಹೋಗಿ ಬಂದೆ. ಅದಾದ ನಂತರ ತುರಮರಿ ಬೆಟ್ಟವನ್ನು ಪರೀಕ್ಷಿಸಿದೆ. ಹೀಗೆ ಹಲವಾರು ಬೆಟ್ಟಗುಡ್ಡ ಸುತ್ತಾಡಿ ನಂತರ ಸವಟಗಿಯ ಹಿರಿಯರ ಬಾಯಿಂದ ತಿಮ್ಮಪ್ಪ ಯಲ್ಲಮ್ಮಳನ್ನು ಓಡಿಸಿದ್ದ ಅನ್ನೋ ಮಾತುಗಳು ಕೇಳಿದಾಗ ನಮ್ಮ ಊರ ಗುಡ್ಡವನ್ನು ಪರೀಕ್ಷಿಸಲು ಹೋದೆ. ಯಲ್ಲಮ್ಮ ತಾಯಿಯ ಪಾದದ ಗುರುತು ಮೂಡಿದ್ದವು ಪವಿತ್ರ ಜಲವು ಇದು ಕಲಿಯುಗವಾದ್ದರಿಂದ ನಷ್ಟವಾಗಿ ಹೋಗಿತ್ತು. ಇದನೆಲ್ಲ ಕಂಡು ಇದೆ ಪರಶುರಾಮ ತಪೋ ಭುಮಿ ಇರಬಹುದು ಎಂದು ಅಲ್ಲಿದ್ದ ಸೂರ್ಯನಾರಾಯನನ್ನು ಪೂಜಿಸಿ ಸುತ್ತಲ ಪರಿಸರ ಶುದ್ಧಗೊಳಿಸಿದೆನು. ಪ್ರತೀದಿನ ಬೆಳಿಗ್ಗೆ ಇಲ್ಲಿಗೆ ಹೊಗುತ್ತಲಿದ್ದೆ. ಕಾಲಕ್ರಮೇನ ನನ್ನಧ್ಯಾನದ ಸಮಯ ಹೆಚ್ಚಿಸುತ್ತಾ ಸಾಗಿದೆ. ಪ್ರಾಥಮಿಕ ಶಾಲಾ ಪ್ರವೇಶವನ್ನು ಪಡೆದೆ.

ಈ ಊರಿನ ಹೊರಗೆ ಒಬ್ಬ ಸಾಧು ಶ್ರೀ ಕರೆಯಮ್ಮ ದೇವಿಯ ಗುಡಿಯಲ್ಲಿ ಇರುತಿದ್ದ. ಅವನ ಮರಣದ ನಂತರ ಅವನಬಳಿ ಇದ್ದ ಪುರಾತನ ಪುಸ್ತಕಗಳನ್ನು ನಾನು ಪಡೆದುಕೊಂಡೆ. ಅದರಲ್ಲಿ ಶಂಬಲಪ್ರವೇಶದ್ವಾರ ಎಂಬ ಕೃತಿ ಸಂಸ್ಕೃತದಲ್ಲಿ ಇತ್ತು. ಅದನ್ನು ವಿಕ್ರಮನ ಪತ್ನಿ ಬರೆದಿದ್ದು ಸಂಪೂರ್ಣ ಗುರುಕುಲ ಈ ಬೆಟ್ಟದಲ್ಲಿ ಇರುವುದು ಖಚಿತವಾಯ್ತು. ನನ್ನ ಬಳಿ ಇರುವ ಈ ಪುಸ್ತಕ ಹುರಕಡ್ಲಿ ಮನೆಯಿಂದ ಈ ಸಾಧುವನ್ನು ತಲುಪಿತ್ತು. ನನ್ನನ್ನು ತಲುಪಿದ ಈ ಗ್ರಂಥ ನನ್ನ ಎಲ್ಲಾ ಪ್ರಶ್ನೆಗೆ ಉತ್ತರವಾಯಿತು.

ನಾನು ಪ್ರೌಢ ಶಿಕ್ಷಣವನ್ನು ಈ ಬೆಟ್ಟದಲ್ಲಿ ಸ್ಥಿತ ಖೋದಾನಪುರ ಪಾಠಶಾಲೆಯಲ್ಲಿ ಪೂರ್ಣಗೊಳಿಸುವಷ್ಟರೊಳಗೆ ನನ್ನ ಗುರುಕುಲ ಶಿಕ್ಷಣ ಉತ್ತಮೋತ್ತಮವಾಗಿ ಸಾಗಿ ಕುಂಡಲಿನಿ ಜಾಗೃತಿಯ ಲಕ್ಷಣದಲ್ಲಿಯ ತ್ರೀನೇತ್ರ ಜಾಗೃತಿಯೊಂದಿಗೆ  ನಾಗಮಣಿಯು ಆಷಾಡ ಪೌರ್ಣಮಿಯದಿನ ಲಭಿಸಿತು.

ಅಗ್ನಿಗುರುಕುಲ ಸ್ಥಾಪನೆಯ ಕನಸನ್ನು ಹೊತ್ತು ಸಫಲರಾದ ಜಮದಗ್ನಿ, ಪರಶುರಾಮರ ಅನಂತರ ಕಲಿ ಮತ್ತು ಅವನ ವಂಶ ಪಿತಾಮಹ ಅಧರ್ಮನ ಕಾರಣಗಳಿಂದ ಮುಂದೆ ನಶಿಸಿ ಮರಳಿ ಸ್ಥಾಪಿಸುವ ಕಾರ್ಯದಲ್ಲಿ ವಿಫಲವಾಗುತ್ತಲೆ ಬಂದಿತ್ತು. ಕಲಿಯುಗದ ಹೊತ್ತಿಗೆ ದಕ್ಷಿನದ ಪಲ್ಲವರ ವಂಶಗಳ ಲೀನವಾಗಿದ್ದ ರೇಣುಕಾ ಸಾಮ್ರಾಜ್ಯದ ನಮ್ಮ ದಾಮೋದರ ಸ್ವಯಂ ಯಶಸ್ಸು ಕಂಡು ಮಹೇಂದ್ರ ಪರ್ವತ ಕಂಡು ಮರಳಿದ್ದರು ಅಧರ್ಮನ ಕುತಂತ್ರಗಳಿಗೆ ಬಲಿಯಾಗಿ ವಿಫಲನಾದ. ರೇನುಕಾರ್ಜುನನು ಸಂಪೂರ್ಣಗುರುಕುಲ ನಷ್ಟವನ್ನು ಕಂಡ ಜೀವಂತ ಸಾಕ್ಷಿಯಾದನೆ ಹೊರತು ಅಗ್ನಿಗುರುಕುಲ ಸ್ಥಾಪಿಸುವಲ್ಲಿ ವಿಫಲನಾದ. ವಿಕ್ರಮನು ಕಲಿಯಿಂದ ವಿಫಲನಾದನು. ವಿನಾಶಹೊಂದುತ್ತ ಇಸ್ಲಾಮೀಯರು, ಕ್ರಿಷ್ಚಿಯನ್ನರು, ಡಚ್ಚರು ಮತ್ತು ಫ್ರೆಂಚರರೂಪದಲ್ಲಿ  ಬ್ರಿಟಷರ ಸ್ವರೂಪದಲ್ಲಿ ಬಂದ ಅಧರ್ಮನ ವಂಶ ನಮ್ಮ ದೇಶದಲ್ಲಿಯ ಗುರುಕುಲಗಳಿಗೆ ಅಂತ್ಯಹಾಡಿ ಕಲಿ ವಿಜಯಿಯಾಗಿ ವಿಜ್ರಮಿಸುತಿದ್ದಾನೆ. ಕಲಿಯ ವಿರುದ್ಧ ನಾನು ಹೋರಾಡಿಗೆಲ್ಲಲು ಸಾಧ್ಯವಾ?

ಪ್ರಯತ್ನಪಟ್ಟು ಕಲಿಯಿಂದ ಹಲವಾರು ಬಾರಿ ಸೋಲನ್ನು ಉಂಡು ಹಿಂದೆ ಸರಿಯದೆ ಗುರುಕುಲ ನಿರ್ಮಾಣ ಕಾರ್ಯಕ್ಕೆ ಪ್ರಯತ್ನಗಳ ಮೆಲೆ ಪ್ರಯತ್ನ ಪಟ್ಟರು ಕಲಿಯು ವಿಜಯಿಯಾಗುತ್ತಿದ್ದಾನೆ. ಸಿದ್ದಾರ್ಥ ಎಂಬ ಒಬ್ಬ ಹುಡುಗನನ್ನು ಕಲಿಯಿಂದ ಪಾರುಮಾಡಲಾಗಲಿಲ್ಲ. ಪ್ರಾಥಮಿಕ ಪಾಠಶಾಲೆಯಲ್ಲೆ ೧೪ ಸಹಪಾಟಿಗಳಿಗೆ ಸನ್ಮಾರ್ಗ ತೋರಿದರು ಕಲಿಯ ಆಟ ಅವರನ್ನು ನನ್ನಿಂದ ದೂರಮಾಡಿತು.



ಕೀಪುಮಾ ಸಮರಕಲೆ ಎಂದರೆ। ಸಂಸ್ಕೃತಿ ರಕ್ಷಣೆಗಾಗಿ। ಕಂಕಣಬದ್ಧ ವ್ಯವಸ್ಥಿತ ಅಧ್ಯಯನ॥

ಪ್ರೌಢ ಶಾಲೆಯ ೫೦ಕ್ಕೂ ಅಧಿಕ ವಿದ್ಯಾರ್ಥಿಗಳಿಗೆ ಕೀಪುಮಾ ಸಮರಕಲೆಯ ಸನ್ಮಾರ್ಗ ತೋರಿದರು ಕಲಿಯ ಸಂಕೋಲೆಯ ಕಾರಣ ವಿಫಲನಾದ ನಾನು ಅಗ್ನಿಗುರುಕುಲ ನಿರ್ಮಿಸುವಲ್ಲಿ ವಿಫಲನಾಗುವೆ ಅನಿಸುತ್ತಿದೆ. ಕೀಪುಮಾ ಜಮದಗ್ನಿಯ ಬೀಜಮಂತ್ರವಾಗಿತ್ತು. ಸಮರ ಕಂಕಣಕಟ್ಟಿ ನಿಲ್ಲುವುದು, ಕಲೆ ವ್ಯವಸ್ಥಿತ ಅಧ್ಯಯನ ಒಟ್ಟಾರೆ ಸಮರಕಲೆ ಕಂಕಣಕಟ್ಟಿ ನಿಲ್ಲುವುದು. ಕೀಪುಮಾ ಸಮರಕಲೆ ಎಂದರೆ ಸಂಸ್ಕೃತಿ, ಪ್ರಕೃತಿಯ ಸಂರಕ್ಷಣೆಗೆ ಕಂಕಣ ಕಟ್ಟಿಅಧ್ಯಯನಕ್ಕೆ ನಿಲ್ಲುವುದು ಎಂದು ಅರ್ಥ.

ನನ್ನಲ್ಲಿಯ ಕಲಿಯನ್ನು ಸೋಲಿಸುವುದು ನನಗೆ ಸುಲಭ. ಆದರೆ ಬೆರೆಯವರಲ್ಲಿಯ ಕಲಿಯನ್ನು ಸೋಲಿಸುವುದು ಅಸಾಧ್ಯ.  ಈ ಅಸಾಧ್ಯವನ್ನು ಸಾಧ್ಯಗೊಳಿಸಲು ನಾನು ಅರಿತ ಸನಾತನ ಶಸ್ತ್ರವೇ ವ್ರತಾಚರಣೆಯ ಮೂಲಕ ಭೋದಿಸುವುದು.

ಈ ಮಾರ್ಗವನ್ನೆ ಅನುಸರಿಸಿ ೦೧) ಸ್ವಯಂ ಸೇವಕವ್ರತ, ೦೨) ಅಗ್ನಿಪಥವ್ರತ, ೦೩) ವಿಜಯೀವ್ರತದ ಮೂಲಕ ಯಶಸ್ವಿಯಾಗಿ ಸಂಪೂರ್ಣ ಆತ್ಮಶಕ್ತಿಯನ್ನು ಜಾಗೃತ ಗೊಳಿಸಿಕೂಳ್ಳ ಬಹುದು. ಕಲಿಯುಗ ಅಂತ್ಯಗೊಳಿಸ ಬಹುದು. ಅಗ್ನಿಗುರುಕುಲ ಶಾಶ್ವತಗೊಳಿಸ ಬಹುದು.

## ಸ್ವಯಂ ಸೇವಕವ್ರತ

ಕೀಪುಮಾ ಸಮರಕಲೆಯ ಮೂಲ ಉದ್ದೇಶ ೧೧೪ ಆತ್ಮಚಕ್ರ ಜಾಗೃತಿಗಾಗಿ ಅತೀಕಠಿಣ ಕಷ್ಟಗಳನ್ನು ಸಹಿಸಿ ವಿಜಯ ಸಾಧಿಸುವುದು. ವ್ರತಧಾರಿಯ ಬ್ರಹ್ಮವು ಸಂಪೂರ್ಣ ಪರಬ್ರಹ್ಮ ಸ್ವರೂಪಕ್ಕೆ ತಿರುಗುವವರೆಗೆ ನಿಷ್ಠೆಯಿಂದ ನಿಂತು ಗೆಲ್ಲುವುದೆ ವ್ರಥಧಾರಿಯ ಕರ್ತವ್ಯ.

ಕೀಪುಮಾ ಸಮರಕಲೆಯಲ್ಲಿ ಸುವಿದ್ಯಾವ್ರತಗಳು ಐದು ಅವು

1. ಸಂಸ್ಕಾರ ವಿದ್ಯೆ - ಸ್ವಯಂ ಸೇವಕವ್ರತ
2. ಶಾಸ್ತ್ರವಿದ್ಯೆ } ಅಗ್ನಿಪಥವ್ರತ
3. ಗಂಧರ್ವವಿದ್ಯೆ } ಅಗ್ನಿಪಥವ್ರತ
4. ಶಸ್ತ್ರವಿದ್ಯೆ } ಅಗ್ನಿಪಥವ್ರತ
5. ಆತ್ಮವಿದ್ಯೆ - ವಿಜಯೀವ್ರತ

ಸ್ವಯಂ ಸೇವಕವ್ರತವು  ಸಂಸ್ಕಾರ ವಿದ್ಯಾ ಪಾರಂಗತ ನನ್ನಾಗಿಸುತ್ತದೆ. ಅಗ್ನಿಗುರುಕುಲದ ಶಾಶ್ವತ ಸದಸ್ಯನಾಗಲು ಸಂಸ್ಕಾರವಿದ್ಯಾ ಪಾರಂಗತನಾಗ ಬೇಕಾದದ್ದು ಅನಿವಾರ್ಯ. ಸಂಸ್ಕಾರವಿದ್ಯಾ ಪಾರಂಗತ ಜನಿವಾರಧಾರಿ ಯಾದಾಗ ಅಗ್ನಿಪಥವ್ರತ ಪ್ರಾರಂಭದೊಂದಿಗೆ ಸಂಸ್ಕಾರವಿದ್ಯಾ ವ್ರತ ಸಂಪೂರ್ಣಗೊಳ್ಳುವುದು.

ಸ್ವಯಂ ಸೇವಕವ್ರತವು ಬ್ರಹ್ಮ ಸದೃಢತೆಗಾಗಿ ನಿಯಮಾದಿತತ್ವಗಳನ್ನು ಮತ್ತು ಜೀವನ ಶೈಲಿಯ ಸನಾತನ ಸರಳ ಮಾರ್ಗಗಳನ್ನು ಭೋದಿಸುತ್ತದೆ.

# ತ್ರಿವಿದ್ಯಾವ್ರತಗಳು

## 01) ಸ್ವಯಂಸೇವಕ ವ್ರತ (ಸಂಸ್ಕಾರವಿದ್ಯೆ)



## 02) ಅಗ್ನಿಪಥವ್ರಥ (ಶಾಸ್ತ್ರ,ಗಂಧರ್ವ,ಶಸ್ತ್ರವಿದ್ಯೆ)



## 03) ವಿಜಯೀವ್ರತ (ಆತ್ಮವಿದ್ಯೆ)





ಸ್ವಯಂ ಸೇವಕ ವ್ರತ

# ಸಂಸ್ಕಾರವಿದ್ಯಾ



ಸ್ವಯಂ ಸೇವಕವ್ರತ ಕೀಪುಮಾ ಸಮರಕಲೆಯ ಅಧ್ಯಯನ ಮತ್ತು ಆಚರಣೆಯ ಮೂರು ಪ್ರಮುಖ ವ್ರತಗಳಲ್ಲಿ ಪ್ರಥಮವ್ರತ. ಸಂಸ್ಕಾರವಿದ್ಯೆ ಪಂಚಸುವಿದ್ಯೆಗಳಲ್ಲಿ ಪ್ರಥಮವಿದ್ಯೆ. ಸಂಸ್ಕಾರ ವಿದ್ಯೆಯ ಅಧ್ಯಯನದೊಂದಿಗೆ ನಮ್ಮ ಸಂಸ್ಕೃತಿಯ ಉಳಿವಿಗಾಗಿ ನಮ್ಮ ಪುಟ್ಟ ಹೆಜ್ಜೆಯನ್ನು ದೈವಮಾರ್ಗದತ್ತ ಹಾಕೋನ ಬನ್ನಿ.

## ಸಂಸ್ಕಾರವಿದ್ಯೆ

1. ನಿಯಮವ್ರತ
2. ತತ್ವವ್ರತ
3. ಆರಾಧ್ಯದೈವ ಮತ್ತು ಆಧ್ಯಾತಿಕಗುರು
4. ಸಂಬಧಿಕರು ಮತ್ತು ಸ್ನೇಹಿತರು
5. ಪಂಚಮೈತ್ರಿ ಗುರುಕುಲ

### 1 ಪಂಚ ನಿಯಮವ್ರತ

ನಿಯಮವ್ರತವು ಶುಕ್ರೋತ್ಪತ್ತಿ ಮತ್ತು ಅದರ ಸದ್ಬಳಕೆಗಾಗಿ ಇರುವ ಸನ್ಮಾರ್ಗವ್ರತ. ಪಂಚ ನಿಯಮ ವ್ರತಗಳು ನಮ್ಮ ಅಗ್ನಿಗುರುಕುಲದ ಐಶ್ವರ್ಯ, ಪಾಲಿಸುವ ಸೌಭಾಗ್ಯವಂತನ ನಿಜವಾದ ಸಂಪತ್ತಾಗಿವೆ. ಪಂಚ ನಿಯಮ ವ್ರತಗಳಿಗೆ ಸಂಪೂರ್ಣ ಬದ್ಧರಾದರೆ ಸಂಸ್ಕಾರವಿದ್ಯೇಯಲ್ಲಿ ೫೦% ಪಾರಂಗತರಾದಂತೆಯೇ.

#### ಪಂಚ ನಿಯಮವ್ರತಗಳು

1. ಬ್ರಹ್ಮಚರ್ಯವ್ರತ
2. ಸಾತ್ವಿಕ ಆಹಾರವ್ರತ
3. ಅರಿಷಡ್ವರ್ಗ ನಿಷಿದ್ಧವ್ರತ
4. ನಾಯಕತ್ವವ್ರತ
5. ತತ್ವಭದ್ದತಾ ವ್ರತ

ಬ್ರಹ್ಮಚರ್ಯ ವ್ರತವನ್ನು ಬಾಲ್ಯದ ೨೫ ವರ್ಷ ಆಚರಿಸಿ ಶುಕ್ರದಸದ್ಬಳಕೆ ಮಾಡಿ, ಸಾತ್ವಿಕ ಆಹಾರ ವ್ರತದ ಮೂಲಕ ಅಧಿಕ ಶುಕ್ರೋತ್ಪತ್ತಿಯನ್ನು ಮಾಡಿಕೊಂಡು, ಅರಿಷಡ್ವರ್ಗಕ್ಕೆ ವಿನಾಕಾರಣ ಶುಕ್ರವ್ಯರ್ಥ ಮಾಡಿಕೊಳ್ಳದೆ. ನಾಯಕತ್ವ ಮತ್ತು ಪಂಚತತ್ವಗಳಿಗೆ ಮಾತ್ರ ಶುಕ್ರದ ಸದ್ಬಳಕೆ ಮಾಡುವುದಕ್ಕೆ ನಿಯಮವ್ರತ ಎನ್ನುವರು.

ಪ್ರಕೃತಿಯಲ್ಲಿ ದೊರಕುವ ಅಮೃತ ಸಮಾನ ಶುಕ್ರಧಾತುವಿನ ಸದ್ಬಳಕೆಯ ಸನ್ಮಾರ್ಗ ಪಂಚನಿಯಮಗಳು. ಈ ವ್ರತಾಚರಣೆಯಿಂದ ಬ್ರಹ್ಮಸದೃಢ ಹೊಂದುತ್ತದೆ . ಸದೃಢ ಬ್ರಹ್ಮದಲ್ಲಿ ಮಾತ್ರ ಸದೃಢ ಪರಬ್ರಹ್ಮವಾಸಿಸುತ್ತದೆ. ನಿಯಮವ್ರತ ಪಾಲಕನಿಂದ ಮಾತ್ರ ಅಗ್ನಿಪಥ ಮತ್ತು ವಿಜಯೀವ್ರತ ಸಂಪೂರ್ಣ ಗೊಳ್ಳುವವು.

### 1 ಬ್ರಹ್ಮಚರ್ಯವ್ರತ

ಬ್ರಹ್ಮಚರ್ಯವ್ರತ:
ಬ್ರಹ್ಮ + ಆಚಾರ್ಯ = ಬ್ರಹ್ಮಚರ್ಯ. ಬ್ರಹ್ಮ ಎಂಬುದು ಪಂಚಭೂತಗಳಿಂದಾದ ಸೃಷ್ಟಿಯ ಜೈವಿಕ ಅಥವಾ ಅಜೈವಿಕ ಪಕೃತಿಯ ವಸ್ತು. ಆಚಾರ್ಯ ಎಂದರೇ ಸುವ್ಯವಸ್ಥಿತವಾಗಿ ಧರ್ಮಾಚರಣೆಯನ್ನು ಮಾಡುವ ವ್ಯಕ್ತಿ. ಒಟ್ಟಾರೆಯಾಗಿ ತನ್ನ ಬ್ರಹ್ಮವನ್ನು ಸದೃಢಗೊಳಿಸಲು ಮಾನವ ಶುಕ್ರಸಂರಕ್ಷಣಾ ಮತ್ತು ಶುಕ್ರಸದ್ಬಳಕೆಯ ಧರ್ಮಾಚರಣೆಗಳಿಗೆ ಬ್ರಹ್ಮಚರ್ಯ ಎನ್ನುವರು.

ಶುಕ್ರ ಎಂದರೇನು?. ಶುಕ್ರ ಆಹಾರದಿಂದ ದೊರೆವ ಸಪ್ತಧಾತುವಿನ ಅಂತಿಮ ಅಮೃತ ಸ್ವರೂಪ ತೇಜಸ್ವಿ ಧಾತು.




ಸಪ್ತಧಾತು
೦೧) ಆಹಾರ
೦೨) ರಸ
೦೩) ರಕ್ತ
೦೪) ಮಾಂಸ
೦೫) ಮೇಧ
೦೬) ಅಸ್ಥಿ
೦೭) ಮಜ್ಜ
೦೮) ಶುಕ್ರ - ಸರ್ವಶಕ್ತ ತೇಜಸ್ವಿ ಧಾತು

ನಾವು ಸೇವಿಸುವ ಆಹಾರ
ಮೊದಲು ಬಾಯಲ್ಲಿ ರಸವಾಗಿ ರಕ್ತದ ಮೂಲಕ ಮಾಂಸವಾಗುತ್ತದೆ. ಮಾಂಸದಿಂದ ಮೇಧ, ಮೇಧದಿಂದ ಅಸ್ಥಿ ಹಾಗೆ ಅಸ್ಥಿಯಿಂದ ಮಜ್ಜ ಮತ್ತು ಅಂತಿಮವಾಗಿ ಮಜ್ಜದಿಂದ ಶುಕ್ರ ಉತ್ಪತ್ತಿಯಾಗುತ್ತದೆ. ಇದು ಸರ್ವಶಕ್ತ ತೇಜಸ್ವಿ ಧಾತು. ಈ ಧಾತುವಿನ ಪರಿವರ್ತನೆಯೆ ಹಾಲು, ವೀರ್ಯಾಣು, ಅಂಡಾಣುಗಳ ಸೃಷ್ಟಿ. ಕಣ್ಣು, ಹೃದಯ, ಮಿದುಳಿಗೆ ಈ ಧಾತುವೇ ಅಮೃತ. ಇನ್ನುಳಿದ ಶರೀರ ಸೂಕ್ಷ್ಮ ಶಕ್ತಿಕೇಂದ್ರಗಳ ಇಂಧನ ಈ ಶುಕ್ರ.

ಶುಕ್ರ ನಾವು ಪಾಲಿಸುವ ಧರ್ಮ ಅಥವಾ ಅಧರ್ಮ ಪಾಲನೆಯ ಆಧಾರದಿಂದಲೇ ಅದು ನಮ್ಮ ಶರೀರಕ್ಕೆ ಉಪಯೋಗವಾಗುತ್ತದೆ. ಧರ್ಮಮಾರ್ಗವು ಶುಕ್ರ ಸದ್ಬಳಕೆಯ ಸನ್ಮಾರ್ಗವಾಗಿದೆ.

ಅಧರ್ಮ ಮಾರ್ಗವು ಶುಕ್ರ ವಿನಾಶಿಯಾಗಿದೆ. ಈ ಧರ್ಮ ಮತ್ತು ಅಧರ್ಮದ ಬಗ್ಗೆ ತಿಳಿಯೋಣ. ಬನ್ನಿ

ಅಧರ್ಮ
ಮಿತ್ಯಾ
ದಂಬ
ಮಾಯಾ
ಲೋಭ
ನಿಕೃತಿ
ಕಲಿ
ದುರುಕ್ತಿ
ಮೃತ್ಯು
ಭಯಾ
ಕ್ರೋಧ
ಹಿಂಸಾ
ನಿರ್ದಯಾ
ಯಾತನಾ

### ಸೃಷ್ಟಿವಿನಾಶಕಾರಿ ಅಧರ್ಮದ ಕುರಿತು

ಅಧರ್ಮ ಸೃಷ್ಟಿಯ ಸಮತೋಲನಕ್ಕೆಂದು ಧರ್ಮಜರಿಗೆ ಎಚ್ಚರ ಗಂಟೆಯಾಗಿರುವ ವಿನಾಶ ಮತಿ, ವೇದ ಸಂಸ್ಕೃತಿಯ ವಿರೋಧಿ. ಸೃಷ್ಟಿ ಕರ್ತ ಬ್ರಹ್ಮವಿನಾಶಕ್ಕೆ ಮುಂದಾಗಿ ರಕ್ಷಾ ಚೈತನ್ಯ ಪರಬ್ರಹ್ಮದ ಕಾರಣ ಸೋಲನು ಭವಿಸಿ ಸೃಷ್ಟಿಯ ವಿನಾಶಕ್ಕೆ ಕಾತರಿಸುತ್ತಿರುವ ಅತಿದೊಡ್ಡ ರಾಕ್ಷಸ. ಈತನು ಪರಬ್ರಹ್ಮಹೀನ ಸ್ಥಳಗಳಲ್ಲಿ ವಾಸಿಸುವನು. ದಶದಿಕ್ಕುಗಳಲ್ಲಿ ಇವನಿಂದ ತಪ್ಪಿಸಿ ಕೊಳ್ಳುವುದು ಪರಬ್ರಹ್ಮಹೀನವಾದಾಗ ಅಸಾಧ್ಯ. ಇವನ ಪತ್ನಿ ಮಿತ್ಯಾ ದಶದಿಕ್ಕುಗಳಲ್ಲಿ ಈ ಮಿತ್ಯಾ ಪರಬ್ರಹ್ಮ ನಷ್ಟಗೊಳಿಸಲು ಇರುವುದು ಇಲ್ಲದ ಹಾಗೆ, ಇಲ್ಲದೆ ಇರುವುದು ಇದ್ದಿರುವ ಹಾಗೆ ಮಾಡಿ ಪ್ರಾಣಿಗಳಲ್ಲಿಯ ಪರಬ್ರಹ್ಮವನ್ನು ನಷ್ಟ ಮಾಡುವಲ್ಲಿ ನಿಪುನೆ. ಅಧರ್ಮನ ಸಹೋದರಿ ಇವಳು.

ದಂಬ - ಮಾಯಾ ಅಧರ್ಮ ಮತ್ತು ಅವನ ಸಹೋದರಿ ಮಿತ್ಯಾಳಿಗೆ ಜನಿಸಿದ ಮಕ್ಕಳು. ಅಧರ್ಮನ ಮಾರ್ಗವನ್ನೆ ಅನುಸರಿಸಿ ಸಹೋದರಿಯಾದ ಮಾಯಾಳ ಮದುವೆ ಆದನು. ದಂಬ ಪ್ರಾಣಿಗಳಲ್ಲಿ ಅಹಂ ಭಾವಕ್ಕೆ ಕಾರಣವಾಗಿ ಅದರ ಪರಬ್ರಹ್ಮದ ಅರಿವನ್ನು ಮರೆಸುವನು. ಮಾಯಾ ಬ್ರಹ್ಮವೇ ನಿಜವೆಂಬ ಕಲ್ಪನಾತೀತಕ್ಕೆ ಕರೆದೊಯ್ಯುವಳು. ಇವಳಿಗೆ ಶರನಾದ ಪ್ರಾಣಿ ಗುಲಾಮಗಿರಿಯಲ್ಲಿ ಉಳಿಯಲು ಹೇಸಲಾರದು.

ದಂಬ - ಮಾಯಾಳ ಮಕ್ಕಳು ಲೋಭ ಮತ್ತು ನಿಕೃತಿ. ಇವರು ತಂದೆಯಂತೆಯೇ ವಿವಾಹವಾದರು. ಗುಲಾಮಗಿರಿಯಲ್ಲಿ ಉಳಿದ ಪ್ರಾಣಿ ಅವಶ್ಯಕತೆಯನ್ನು ಮೀರಿ ಪಡೆವ ದುರ್ಬುದ್ದಿ ನೀಡುವ ವನೇ ಈ ಲೋಭ. ಅದು ಸಿಗದೇ ಹೋದಾಗ ಅಥವಾ ಸಿಕ್ಕರು ಅತೀರೇಖದತ್ತ ಆ ಪ್ರಾಣಿಯ ಚಿತ್ತ ನಿಗ್ರಹಿಸ ಕುಕಾರ್ಯ ಮಾಡಿಸುವವಳು ಈ ನಿಕೃತಿ.

ಲೋಭ ನಿಕೃತೀಯ ಮಕ್ಕಳು ಕಲಿ ದುರುಕ್ತಿ. ಕುಕಾರ್ಯಕ್ಕಕೆ ಸಿದ್ದನಾದ ವ್ಯಕ್ತಿಯೇ ಕಲಿ. ಸದಾ ಕಾಮವಾಸನೆಯೇ ಇವನ ಲಕ್ಷಣ. ಶುಕ್ರ ಹೀನ ನನ್ನಾಗಿಸಿ ಪರಬ್ರಹ್ಮದ ನಾಶವನ್ನು ಆರಂಭಿಸುವ ಅತೀ ಭಯಾನಕ ವಿನಾಶದ ಅಸ್ತ್ರ. ವಿನಾಶ ಆರಂಭವಾದ ಮೇಲೆ ದುರುಕ್ತಿಯವಾಸ, ವಿನಾಶಕ್ಕೆ ಈ ಪ್ರಾಣಿಯನ್ನೆ ಅಸ್ತ್ರವಾಗಿಸಿಕೊಳ್ಳುವಳು.



ಕಲಿಯು ತನ್ನ ಒಂದು ಕೈಯಲ್ಲಿ ಮರ್ಮಾಂಗ ಮತ್ತು ಇನ್ನೊಂದು ಕೈಯಲ್ಲಿ ನಾಲಿಗೆಯನ್ನು ಸದಾ ಹಿಡಿದು ಕೊಂಡಿರುತ್ತಾನೆ. ಯಾವ ಪ್ರಾಣಿ ಇವನಿಗೆ ಶರಣಾಗುವುದೊ ಅದರ ಮೂಲಕ ತನ್ನ ಕಾಮವ್ಯಾಧಿಯ ತೆವಲನ್ನ ತೀರಿಸಿಕೊಂಡು ಆ ಪ್ರಾಣಿಯ ಪರಬ್ರಹ್ಮದ ನಾಶಕ್ಕೆ ಮೂಲಕಾರಣವಾಗುವನು. ದುರುಕ್ತಿಯು ಆ ಪ್ರಾಣಿ ಮರಳಿ ಸನ್ಮಾರ್ಗಕ್ಕೆ ಹೊಗದಂತೆ ತಡೆದು ತಮ್ಮಂತೆಯೇ ದಾನವ ನನ್ನಾಗಿಸುತ್ತಾಳೆ.

ಕಲಿ - ದುರುಕ್ತಿಯ ಸಂತಾನವಾದ ಮೃತ್ಯು ಮತ್ತು ಭಯಾಳ ಸಮ್ಮಿಲನದಿಂದ ಕ್ರೋದ ಹಿಂಸಾಳ ಜನನವಾಗುತ್ತದೆ. ದಾನವನಾದ ಪ್ರಾಣಿ ಪರಬ್ರಹ್ಮ ಹೀನವಾಗಿರುವ ಕಾರಣ ಮೃತ್ಯು ಮತ್ತು ಭಯಾಳ ಋಣಾತ್ಮಕ ಶಕ್ತಿಗೆ ವಾಸ ಸ್ಥಾನವಾಗಿ ಅವರ ಶಕ್ತಿ ಹೆಚ್ಚಾಗಿಸುವನು. ತಾನು ಮೃತ್ಯುವಿನ ಭಯದಲ್ಲಿ ಭಯಾಳ ಕರಿನೆರಳಿನಲ್ಲಿ ಕರಾಳತೆಯ ದಿನಗಳನ್ನು ಕಳೆಯುತ್ತ ಸಾಗುವನು. ಋಣಾತ್ಮಕ ಶಕ್ತಿಯ ವಿಕಾಸದಿಂದ ಆ ಪ್ರಾಣಿ ಕ್ರೋಧನ ಆಗಮನದಿಂದ ಹಿಂಸೆಯಲ್ಲಿ ಕಾಲ ಕಳೆಯವುದು.

ಕ್ರೋಧ ಮತ್ತು ಹಿಂಸಾಳ ಸಂತಾನವಾದ ನಿರ್ದಯಾ ಮತ್ತು ಯಾತನಾ ಈ ಪ್ರಾಣಿಯನ್ನು ಪರಬ್ರಹ್ಮ ರಹಿತನನ್ನಾಗಿಸುವವು. ಅಧರ್ಮನ ವಂಶಸ್ಥರ ವಿಕಾಸದಿಂದ ಪರಬ್ರಹ್ಮ ಹೀನವಾದ ಪ್ರಾಣಿಯು ಮರಳಿ ಧನಾತ್ಮಕತೆಯತ್ತ ಬರದಿರದಂತೆ ಅದರಕೈಯಿಂದ ಸಾಕಷ್ಟು ಅತ್ಯಾಚಾರ ಅನಾಚಾರಗಳನ್ನು ಮಾಡಿಸಿ ಪಾಪಿಯನ್ನಾಗಿ ಪರಿವರ್ತಿಸುತ್ತದೆ. ಕೊನೆಯಲ್ಲಿ ಯಾತನಾಳ ಆಟ ಶುರು. ಆ ಪ್ರಾಣಿಯಲ್ಲಿಯ ಪರಬ್ರಹ್ಮ ಅಧರ್ಮನ ಕಾರಣಕ್ಕೆ ಯಾತನಾಳ ಯಾತನೆಯಲ್ಲಿಯೆ ಕಾಲಕಳೆಯುವಂತೆ ಮಾಡಿ ಆ ಪ್ರಾಣಿಯನ್ನು ದಾನವ ನನ್ನಾಗಿಸುವುದು. ದಾನವ ಅಧರ್ಮನ ಮಾರ್ಗವನ್ನು ಪರಿಪಾಲಿಸುವನು. ಧರ್ಮ ಸಂಸ್ಕೃತಿಯ ನಾಶ ಇವರ ಕಾಯಕ.

ಅಧರ್ಮನ ಪ್ರವೇಶದಿಂದ ಮಾನವನು ರಾಕ್ಷಸನಾಗುತ್ತ ಸಾಗುತ್ತಾನೆ. ಅಧರ್ಮನ ಜೊತೆ ಮಿತ್ಯಾ ಮಾನವನಲ್ಲಿ ಏಕಕಾಲಕ್ಕೆ ಪ್ರಕಟವಾಗುವಳು. ದಂಬನಿಂದ ಕೊಬ್ಬಿ ಮಾಯಾ ಸೃಷ್ಟಿಯೇ ಸತ್ಯವೆಂದು ನಂಬಿ ಲೋಭಿಯಾಗುತ್ತ ನಿಕೃತಿ ವಿಚಾರಧಾರಿ ಯಾಗುವನು.

ಈ ಎಲ್ಲಾ ಲಕ್ಷಣಗಳ ಪರಿಪಕ್ವತೆಯಿಂದ ಕಲಿಯ ಲಕ್ಷಣಗಳಿಂದ ಇವನು ದುರುಕ್ತಿಯ ದಾಸನಾಗುವನು. ಮೃತ್ಯು ಮತ್ತು ಭಯದ ವಾತಾವರಣದೊಂದಿಗೆ ಜೀವಿಸುವನು. ಕ್ರೋಧ ಮತ್ತು ಹಿಂಸೆಯೇ ಇವನ ಕಾಯಕವಾಗುವುದು. ನಿರ್ದಯೀಯಾದ ಇವನು ಯಾತನೆಯಲ್ಲೆ ರಾಕ್ಷನಾಗಿ ಪರಿವರ್ತಿತನಾಗುವನು.

ಈ ವ್ಯಕ್ತಿಯ ಪರಬ್ರಹ್ಮ ಸ್ವರೂಪಿ ಆತ್ಮ ಶಕ್ತಿಹೀನವಾದ ಕಾರಣ ಮುಕ್ತವು ಆಗದೆ ದರಿದ್ರ ಜನ್ಮದೊಂದಿಗೆ ಜನಿಸಿ ಯಾತನೆಯಲ್ಲಿಯೆ ರಾಕ್ಷಸೀಯ ಪ್ರವೃತ್ತಿಯ ಬದುಕಿನ ಚಕ್ರ ತಳ್ಳುವುದು. ಇದರಿಂದ ಅಧರ್ಮಿಗಳ ಸಂಖ್ಯೆ ಹೆಚ್ಚಾಗುವುದು. ಸೃಷ್ಟಿ ಪರಬ್ರಹ್ಮಶಕ್ತಿಹೀನವಾಗುವುದು. ಕಲಿಯ ಲಕ್ಷಣಗಳ ಯುಗವು ಅತೀರೇಖಕ್ಕೇರಿ ಅಧರ್ಮದ ಅಡಿಯಾಳಾಗಿ ಬದುಕುವುದು. ಧರ್ಮನಶಿಸಿ ಆತ್ಮಪರಂಜ್ಯೋತಿ ಪರಬ್ರಹ್ಮ ನಷ್ಟಹೊಂದುವುದು. ಕರಾಳತೆಯಲ್ಲಿ ಪ್ರಾಣಿ ಸಂಕುಲ, ಪ್ರಕೃತಿ ಮತ್ತು ಮಾತೆ ಸ್ತ್ರೀಯ ಪರಿಸ್ಥಿತಿ ಸೋಚನೀಯ!. ಇದು ಅಧರ್ಮನ ಅಧರ್ಮದ ಪವಾಡ.

## ಅಧರ್ಮನ ಪ್ರವೇಶ ಮಾನವನಲ್ಲಿ ಹೇಗೆ ಉತ್ಪನ್ನವಾಗುತ್ತದೆ?

01) ಜುಜು - ಅನಾಯಾಸವಾಗಿ ಸಂಪಾದಿಸ ಬಯಸುವ ಆಲಸಿಗಳು. ಇದರಿಂದ ಸುಳ್ಳು, ಕಳ್ಳತನ ಮತ್ತು ಮೋಸಪ್ರವೃತ್ತಿಯು ಬೆಳೆಯುತ್ತದೆ. ಪರಬ್ರಹ್ಮ ಪ್ರಿಯ ಸತ್ಯ ನಷ್ಟವಾಗುವುದು. ರಾಕ್ಷಸರ ಆದಾಯ ಮೂಲ ಇದಾಗಿದೆ.

02) ವ್ಯವಿಚಾರ - ವ್ಯಯ + ವಿಚಾರ = ವ್ಯವಿಚಾರ ಅಂದರೆ ಅವಶ್ಯವೇ ಇರದ ವಿಚಾರ ಮಾಡುವುದು. ಇದರಿಂದ ವೇಶ್ಯಾವಾಟಿಕಾ ಪ್ರವೃತ್ತಿ ಬೆಳೆಯುತ್ತದೆ. ರಾಕ್ಷಸರ ಆನಂದ ಇದಾಗಿದೆ.

03) ಮಾಂಸ - ಪ್ರಾಣಿಯ ಬ್ರಹ್ಮವಾದ ಮಾಂಸ ಸೇವನೆಯು ಬ್ರಹ್ಮಹತ್ಯಾ ದೋಷವಾಗಿದೆ. ಮಾನವ ನಿರಾಯಾಸವಾಗಿ ಆಹಾರ ಪಡೆಯಲು ಈ ದುಷ್ಕಾರ್ಯ ಮಾಡುವನು. ಇದರಿಂದ ಅರಿಷಡ್ವರ್ಗ ನೀಯಂತ್ರಣ ರಹಿತವಾಗುತ್ತವೆ. ದಯಾಗುಣ ನಷ್ಟವಾಗುತ್ತದೆ. ರಾಕ್ಷಸರ ಆಹಾರ ಇದಾಗಿದೆ.

04) ಮಧಿರೆ - ಅರ್ಥವೇ ಇರದ ಪಾನ. ಈ ಮಧ್ಯಪಾನ. ರಾಕ್ಷಸರ ದಾಹತನಿಸುವ ಕಾರ್ಯ ಈ ಮಧಿರೆ ಮಾಡುತ್ತದೆ. ಇದರಿಂದ ತಪೋಗುಣ ನಿರ್ನಾಮವಾಗುತ್ತದೆ.

ಈ ಮೇಲೆ ನೀಡಿದ ನಾಲ್ಕು ಮಾರ್ಗಗಳು ರಾಕ್ಷಸರ ಜೀವನ ಶೈಲಿಗಳಾಗಿವೆ. ರಾಕ್ಷಸರು ಸೃಷ್ಠಿ ವಿನಾಶದ ಕಾರ್ಯದಲ್ಲೆ ಜೀವಿಸುತ್ತಾರೆ. ಅಧರ್ಮನ ಇಡೀ ಕುಟುಂಬದ ಲಕ್ಷಣ ಇವರಲ್ಲಿ ಇರುತ್ತವೆ. ಅಶಿಕ್ಷಿತರಾದ ಇವರು ಗುಲಾಮಗಿರಿಯ ಶಿಕ್ಷಣ ಪಡೆದಿರುತ್ತಾರೆ.

ಅರಿತೊ ಅರಿಯದೋ ಸಂಸ್ಕಾರವಂತ ಮಾನವ ಈ ನಾಲ್ಕು ಕುಕಾರ್ಯದಲ್ಲಿ ಒಂದನ್ನಾದರು ಮಾಡಿದ್ದಾದರೆ ಅವನಲ್ಲಿ ಅಧರ್ಮ ಪ್ರವೇಶಿಸಿ ಆತನಲ್ಲಿಯ ಪರಬ್ರಹ್ಮವನ್ನು ವಿನಾಶದತ್ತ ಕೊಂಡೋಯ್ಯುವನು. ಯಾತನೆಯ ಹಂತದವರೆಗೂ ಅಧರ್ಮ ಮಾರ್ಗ ಒಯ್ಯುವಲ್ಲಿ ಸೋಲುವ ಆಯ್ಕೆಯೆ ಇಲ್ಲ.

## ಧರ್ಮದ ಪ್ರವೇಶ ಮಾನವನಲ್ಲಿ ಹೇಗೆ ಉತ್ಪನ್ನವಾಗುತ್ತದೆ?

ಸತ್ಯ - ಅನಾಯಾಸವಾಗಿ ಸಂಪಾದಿಸ ಬಯಸದ ಶ್ರಮಜೀವನ. ಇದರಿಂದ ಸುಳ್ಳು ಹೇಳದ, ಕಳ್ಳತನ ಮಾಡದ ಮತ್ತು ಮೋಸಪ್ರವೃತ್ತಿಯು ನಷ್ಟವಾಗುತ್ತದೆ. ದೇವತೆಗಳ ಆದಾಯ ಮೂಲ ಇದಾಗಿದೆ.

ಪಾವಿತ್ರ್ಯ - ನಿರ್ಮಲ ಮನಸ್ಥಿಥಿಯೇ ಪಾವಿತ್ರ್ಯ. ದೇವತೆಗಳ ಪರಮಾನಂದ ಸ್ಥಿತಿ ಇದಾಗಿದೆ.

ದಯೆ - ಪ್ರಾಣಿಯು ಬ್ರಹ್ಮ, ಪರಬ್ರಹ್ಮಸ್ವರೂಪ ದೈವ ಸೃಷ್ಟಿಯಾಗಿರುವುದು. ಅದರ ಸೇವೇಯೇ ದೇವತೆಗಳ ಕೈಂಕರ್ಯ. ಅರಿಷಡ್ವರ್ಗ ನಿಯಂತ್ರಕ ಮತ್ತು ಸನ್ಮಾರ್ಗ ಈ ದಯಾಗುಣ.

ತಪಸ್ಸು - ಪರಬ್ರಹ್ಮ ತೇಜಪ್ರಾಪ್ತಿಯ ಸನ್ಮಾರ್ಗ. ಭಕ್ತನಾಗಿ ತದನಂತರ ವ್ರಥಸಾಧನೆಯ ಮೂಲಕ ದೈವವಾಗುವ ಸನ್ಮಾರ್ಗ.

ಈ ಮೇಲೆ ನೀಡಿದ ನಾಲ್ಕು ಮಾರ್ಗಗಳು ದೇವತೆಗಳ ಜೀವನ ಶೈಲಿಗಳಾಗಿವೆ. ದೇವತೆಗಳು ಸೃಷ್ಠಿ ವಿಕಾಸದ ಕಾರ್ಯದಲ್ಲೆ ಜೀವಿಸುತ್ತಾರೆ. ಶಿಕ್ಷಿತರಾದ ಇವರು ಸ್ವತಂತ್ರರಾಗಿರುತ್ತಾರೆ. ಅರಿತೊ ಅರಿಯದೋ ಸಂಸ್ಕಾರವಂತ ಮಾನವ ಈ ನಾಲ್ಕು ಸುಕಾರ್ಯ ಮಾಡಿದ್ದಾದರೆ ಅವನಲ್ಲಿ ದೈವ ಪ್ರವೇಶಿಸಿ ಆತನಲ್ಲಿಯ ಪರಬ್ರಹ್ಮವನ್ನು ವಿಕಾಸದತ್ತ ಕೊಂಡೋಯ್ಯುವುದು.

ವೈಕುಂಠ ಸುಖಪ್ರಾಪ್ತಿಯ ಹಂತದವರೆಗೂ ಧರ್ಮ ಮಾರ್ಗ ಒಯ್ಯುವಲ್ಲಿ ಸೋಲುವ ಆಯ್ಕೆಯೆ ಇಲ್ಲ. ಈ ಕಾರಣದಿಂದ ಧರ್ಮ ಮತ್ತು ಅಧರ್ಮ ವೈರತ್ವ ಸಾರಿವೆ. ಧರ್ಮ ಪರಬ್ರಹ್ಮ ಚೈತನ್ಯ ಸ್ವರೂಪ ವಿಷ್ಣುವಿನ ಆರಾಧಿಸಿದರೆ, ಅಧರ್ಮ ವಿಷ್ಣು, ದೇವತೆಗಳನ್ನು ವಿರೋಧಿಸುತ್ತ ತನ್ನ ವಂಶಜರಿಂದ ಪೀಡನೆ ನೀಡುತ್ತಲೇ ಬಂದಿದೆ. ಅದಕ್ಕಾಗಿ ಪರಬ್ರಹ್ಮ ಸ್ವರೂಪ ಆತ್ಮಜ್ಯೋತಿಯನ್ನು ಬೆಳಗಲು ಶುಕ್ರವು ಅವಶ್ಯಕ.

ಅಧರ್ಮ ಮಾರ್ಗದಲ್ಲಿ ಹೊರಟರೆ ಶುಕ್ರವು ವೀರ್ಯರೂಪಕ್ಕೆ ಪರಿವರ್ತನೆಯಾಗಿ ನಷ್ಟಹೊಂದುವುದು. ಧರ್ಮ ಮಾರ್ಗದಲ್ಲಿ ಸಾಗಿದರೆ ಶುಕ್ರವು ಬ್ರಹ್ಮಸದೃಢಗೊಳಿಸಿ ಪರಬ್ರಹ್ಮ ಜಾಗೃತಿಗಾಗಿ ಕುಂಡಲಿನಿ ಜಾಗೃತವಾಗುವುದು. ಇದು ಬ್ರಹ್ಮಚರ್ಯವ್ರತ ಸಂಕ್ಷಿಪ್ತ ಮಾಹಿತಿ.




# 2 ಸಾತ್ವಿಕ ಆಹಾರವ್ರತ

ಸಾತ್ವಿಕ ಆಹಾರವ್ರತವು ಕಡಿಮೇ ಸಮಯದಲ್ಲಿ ಹೆಚ್ಚಿನ ಶುಕ್ರ ಉತ್ಪತ್ತಿಗಾಗಿ ದೈವತ್ವ ಪ್ರಾಪ್ತಿಗಾಗಿ ಮಾನವನಿಗೆ ದೈವ ನೀಡಿದ ಉಡುಗೊರೆ.










ಪರಬ್ರಹ್ಮಸಹಿತ ಆಹಾರ ಸಾತ್ವಿಕ ಆಹಾರವಾಗಿದೆ. ಪರಬ್ರಹ್ಮರಹಿತ ಆಹಾರ ರಾಜಸ ಆಹಾರವಾಗಿದೆ. ಬ್ರಹ್ಮವಿಕೃತ ಆಹಾರ ಪದಾರ್ಥ ತಾಮಸ ಆಹಾರವಾಗಿದೆ. ಉದಾಹರಣೆಗೆ ಹಸಿಯಾದ ಬಟಾಟೆ ಸಾತ್ವಿಕ. ಕುದಿಸಿ ಬೇಯಿಸಿದ ಬಟಾಟೆ ರಾಜಸ. ಬೆಂಕಿಯಲ್ಲಿ ಸುಟ್ಟ ಬಟಾಟೆ ತಾಮಸವಾಗಿರುತ್ತದೆ.

ಸಾತ್ವಿಕ ಆಹಾರದಿಂದ ೯೦% ಶುಕ್ರಪ್ರಾಪ್ತಿಯಾಗುತ್ತದೆ. ರಾಜಸ ಆಹಾರದಿಂದ ಬೂಜ್ಜು ಪ್ರಾಪ್ತಿಯೊಗುತ್ತದೆ. ತಾಮಸ ಆಹಾರದಿಂದ ಅನಾರೋಗ್ಯ ಉಂಟಾಗುತದೆ. ೯೯% ಹಸುವಿನ ಹಾಲಿನಿಂದ ಶುಕ್ರಪ್ರಾಪ್ತವಾಗುತ್ತದೆ. ೧೦೦% ಔಷಧಿ ಸಸ್ಯಗಳಿಂದ ಶುಕ್ರ ದೊರಕುತ್ತದೆ.

ರಾಕ್ಷಸ ಮತ್ತು ಅಮೃತಹನಿಯಿಂದ ಉತ್ಪತ್ತಿಯಾದ ಬಳ್ಳೊಳ್ಳಿ ಮತ್ತು ಉಳ್ಳಾಗಡ್ಡಿ ಅಧರ್ಮ ಕಾರ್ಯಗಳಿಗೆ ಪ್ರೇರಣೆಯಾಗುತ್ತದೆ, ಹಾಗೆ ಮಾಂಸ, ಮೊಟ್ಟೆ ರಾಕ್ಷಸೀಯ ಭೋಜನ. ಇವುಗಳನ್ನು ಉಪಯೋಗಿಸುವುದು ವಿನಾಶಕ್ಕೆ ನಾಂದಿ. ಇನ್ನು ಉಪ್ಪು ಮತ್ತು ಖಾರವನ್ನು ಉಪಯೋಗ ಅತೀಕಡಿಮೇ ಗೊಳಿಸ ಬೇಕು.

ಶುಕ್ರಪ್ರಾಪ್ತಿಯೇ ನಮ್ಮ ಬ್ರಹ್ಮಸ್ವರೂಪಿ ಶರೀರಕ್ಕೆ ಅತ್ಯವಶ್ಯವಾದ ಉಡುಗೊರೆ. ಬ್ರಹ್ಮಚರ್ಯಕ್ಕೆ ಸಾತ್ವಿಕ ಆಹಾರ ಕ್ರಮವೇ ದಿವ್ಯ ಔಷಧಿ.



## 3 ಅರಿಷಡ್ವರ್ಗ ನಿಷಿದ್ಧವ್ರತ




1. ಕಾಮ
2. ಕ್ರೋಧ
3. ಲೋಭ
4. ಮೋಹ
5. ಮಧ
6. ಮತ್ಸರ

ಸ್ವಾಭಾವಿಕವಾಗಿ ಪ್ರಾಣಿಗಳಲ್ಲಿ ಉತ್ಪನ್ನ ಹೊಂದುವ ಆರು ಗುಣಗಳಿಗೆ ಅರಿಷಡ್ವರ್ಗ ಎನ್ನುವರು. ಈ ಆರುಗುಣಗಳು ಪ್ರಾಣಿಗಳಲ್ಲಿ ಅವುಗಳ ಸಂತಾನ ಅಭಿವೃದ್ಧಿಗಾಗಿ ಕಾಮ, ವಿವಿಧ ಅನ್ಯಪ್ರಾಣಿಗಳಿಂದ ರಕ್ಷಣೆ ಪಡೆಯಲು ಕ್ರೋಧ, ತನ್ನ ಮತ್ತು ತನ್ನ ಕುಟುಂಬದ ಉಳಿವಿಗಾಗಿ ಲೋಭ, ಅನ್ಯ ಪ್ರಾಣಿ / ವಸ್ತುವಿನ ವೈಶಿಷ್ಟ್ಯ ತನ್ನದಾಗಿಸುವ ಮೋಹ, ಮೋಹದ ಫಲವನ್ನು ಪಡೆದ ನಂತರ ತನ್ನ ಪ್ರಶಂಸೆಗಾಗಿ ಮಧ, ತಾಕಟ್ಟಿದ ವ್ಯವಸ್ಥೆಯನ್ನು ಅನ್ಯರಿಂದ ಕಾಪಾಡಲು ಮತ್ಸರ ಭಾವಣೆಯು ಮನುಜ ಮಾತ್ರವಲ್ಲ ಎಲ್ಲಾ ಜೀವಿಯಲ್ಲಿ ಜೀವವ್ಯವಸ್ಥೆ ಕಾಪಾಡುವ ಪಕೃತಿ ನಿಯಮವಾಗಿವೆ.

ಅರಿಷಡ್ವರ್ಗಕ್ಕೆಯೆ ನಮ್ಮ ಶುಕ್ರ ಅತ್ಯಂತ ಖರ್ಚಾಗುತ್ತದೆ. ಆದ್ದರಿಂದ ಅರಿಷಡ್ವರ್ಗಕ್ಕೆ ಲಗಾಮನ್ನ ಹಾಕಿ ಶುಕ್ರವನ್ನು ಉಳಿಸಿಕೊಳ್ಳ ಬೇಕು. ಅಧರ್ಮಕಾರ್ಯ ಮಾಡುವ ಮನುಜನಿಗೆ ಈ ಆರು ಗುಣಗಳು ನಿಯಂತ್ರಣಕ್ಕೆ ಸಿಗದೆ ದುರ್ಗುಣಗಳಾಗಿ ಎರ್ಪಟ್ಟು ಅಧರ್ಮನ ಕೈ ಸೇರುವುದರೊಂದಿಗೆ ರಾಕ್ಷಸ ಪ್ರವೃತ್ತಿಗೆ ತಿರುಗುವನು. ಅದಕ್ಕಾಗಿ ಅರಿಷಡ್ವರ್ಗಗಳನ್ನು ಪರಶುರಾಮರು ನಿಷದ್ಧಗೊಳಿಸಿದ್ದಾರೆ.

ಈ ವ್ರತಾಚರಣೆಯಿಂದ ಅತ್ಯಧಿಕ ಶುಕ್ರ ಉಳಿತಾಯವಾಗುತ್ತದೆ.

---



## 4 ನಾಯಕತ್ವ




1. ಗೌರವ
2. ವಿಶ್ವಾಸ
3. ನಂಬಿಕೆ
4. ಭಕ್ತಿ
5. ಪ್ರೀತಿ
6. ಕರ್ತವ್ಯ

ನಾಯಕತ್ವ ನಮ್ಮದಾಗಲು, ಯಾವಾಗಲು ಸಂಸ್ಕೃತಿ, ಪ್ರಕೃತಿ, ವಿದ್ಯೆ, ಗುರು ಮುಖ್ಯವಾಗಿ ತನ್ನಕುರಿತು ತನಗೆ ಗೌರವ ಮತ್ತು ವಿಸ್ವಾಸವಿರುವುದೆ ಮೊದಲ ಹಂತ. ತನ್ನ ಸುತ್ತಲ ಪರಿಸರದ ಸ್ವಚ್ಛತೆ, ತನ್ನ ವಯಕ್ತಿಕ ಸ್ವಚ್ಛತೆಯಿಂದ ಮನಸು ಪ್ರಸನ್ನವಾಗಿ ಗೌರವ ಹಾಗೂ ವಿಶ್ವಾಸ ಇಮ್ಮಡಿಯಾಗುತ್ತವೆ. ಯಾವಾಗ ನಮ್ಮ ಬಗ್ಗೆ ನಮಗೆ ಅರಿವಾಗುತ್ತದೊ ಅವಾಗಲೇ ನಂಬಿಕೆ ಹುಟ್ಟುವುದು. ನಮ್ಮ ಸೃಷ್ಟಿಯ ಬ್ರಹ್ಮ ಜ್ಞಾನವೇ ಇದಕ್ಕೆ ಉತ್ತಮ ಔಷಧ. ನಂಬಿಕೆ ಇಮ್ಮಡಿ ಯಾಗಲು ವ್ಯವಸ್ಥಿತ ಅಧ್ಯಯನದ ಅವಶ್ಯಕತೆ ಇರುತ್ತದೆ. ದೈವ, ಕಲಿಕೆ, ಪ್ರಕೃತಿ, ಸಂಸ್ಕೃತಿಯ ಕುರಿತು ನಂಬಿಕೆ ಅಘಾಧವಾದಾಗಲೇ ಭಕ್ತಿಯ ಆರಂಭ. ತಪಸ್ಸಿನ ಪ್ರಥಮ ಹಂತ ಭಕ್ತಿಯಾಗಿರುತ್ತದೆ. ಯಾವಾಗ ಭಕ್ತಿಯಲ್ಲಿ ಲೀನವಾಗುವ ಸ್ಥಿತಿಯನ್ನು ದಾಟುವನೋ ಆ ಸ್ಥಿತಿಯೇ ಪ್ರೀತಿಯಾಗಿರುತ್ತದೆ.

ದೈವ, ಕಲಿಕೆ, ಪ್ರಕೃತಿ, ಸಂಸ್ಕೃತಿಯ ಕುರಿತು ಪ್ರೀತಿಯ ಹಂತವನ್ನು ತಲುಪುವ ವ್ಯಕ್ತಿಯಲ್ಲಿ ನಾಯಕತ್ವದ ಲಕ್ಷಣಗಳು ಅವನ ವ್ಯಕ್ತಿತ್ವದೊಂದಿಗೆ ಸಂಯೋಜನೆ ಹೊಂದುತ್ತವೆ. ಪ್ರೀತೀಯ ಉತ್ತುಂಗವೇ ಕರ್ತವ್ಯವಾಗಿರುತ್ತದೆ. ದೈವದ ಸ್ವರೂಪ, ಪ್ರಕೃತಿಯ ಸ್ವರೂಪ, ಕಲಿಕೆಯ ಸ್ವರೂಪ ಮತ್ತು ಸಂಸ್ಕೃತಿಯ ಸ್ವರೂಪನೇ ಕರ್ತವ್ಯಹಂತದಲ್ಲಿ ಇವನಾಗುವನು. ಕರ್ತವ್ಯದ ಉತ್ತುಂಗ ಸ್ಥಿತಿಯೇ ನಾಯಕತ್ವ. ನಾಯಕತ್ವಕ್ಕೆ ನಮ್ಮ ಸಂಪೂರ್ಣ ಶುಕ್ರವನ್ನು ಸಮರ್ಪಿಸ ಬೇಕು. ನಾಯಕತ್ವವೇ ದೈವದ ಪ್ರಥಮ ಲಕ್ಷಣ.

ಕೀಪುಮಾ ಸಮರಕಲೆಯ ಆದ್ಯ ನಿಯಮವಾದ ಇದು ನಿಮ್ಮ ವ್ಯಕ್ತಿತ್ವವನ್ನ ದೈವತ್ವವನ್ನಾಗಿ ಬದಲಾಯಿಸುತ್ತದೆ.






## ಪಂಚತತ್ವಗಳು

ತತ್ವವ್ರತವು ಸಮಯ ಮತ್ತು ಶುಕ್ರದ ಸದ್ಬಳಕೆಗಾಗಿ ಇರುವ ಸನ್ಮಾರ್ಗವ್ರತ. ತತ್ವವ್ರತವು ಪಾಲಿಸುವಾತನ ಸೌಭಾಗ್ಯ ಉನ್ನತೀಕರಿಸುವ ಸಂಪತ್ತು.

### ಪಂಚತತ್ವ ವ್ರತಗಳು

1. ಶಾಂತಿ
2. ಶಿಸ್ತು
3. ಸಂಯಮ
4. ವಿಜಯೀ ತ್ರಯೋಮಾರ್ಗ ವ್ರತ
5. ಚತುರಾಶ್ರಮ ವ್ರತ

## 1 ಶಾಂತಿವ್ರತ

ಭೂತ ಭವಿಷ್ಯತ್ತಿಗೆ ಶುಕ್ರವ್ಯಯಿಸದೆ ವರ್ತಮಾನದಲ್ಲಿ ಪ್ರಸನ್ನತೆಯಿಂದ ಸಚ್ಚಿದಾನಂದ ಸ್ವರೂಪವಾಗಿ ಜೀವಿಸುವುದಕ್ಕೆ ಶಾಂತಿ ಎನ್ನುತ್ತಾರೆ. ಶಾಂತಿ ವ್ರತವು ಶ್ರೇಷ್ಠವ್ರತವಾಗಿದೆ.

## 2 ಶಿಸ್ತುವ್ರತ

ಯಾವ ಸ್ಥಳದಲ್ಲಿ ಹೇಗೆ ಇರಬೇಕೋ ಹಾಗೆ ಇರುವುದನ್ನು ಶಿಸ್ತು ಎನ್ನುವರು. ಶಿಸ್ತುವ್ರತವು ಶುಕ್ರದ ಸಮರ್ಪಕ ಬಳಕೆಗೆ ಸಹಾಯಕವಾಗಿದೆ.

## 3 ಸಂಯಮವ್ರತ

ಯಾರೊಂದಿಗೆ ಹೇಗೆ ವರ್ತಿಸಬೇಕೋ ಹಾಗೆ ವರ್ತಿಸುವುದನ್ನು ಸಂಯಮ ಎನ್ನುವರು. ಸಂಯಮವ್ರತವು ಸಮಯ ಮತ್ತು ಶುಕ್ರದ ಸಮರ್ಪಕ ಬಳಕೆಗೆ ಸಹಾಯಕವಾಗಿದೆ.

## 4 ವಿಜಯೀ ತ್ರಯೋಮಾರ್ಗ ವ್ರತ

### ಸ್ವಯಂ ಸೇವಕವ್ರತ

**ಸುಪ್ರಭಾತವ್ರತ**

- **3:00 - 4:00** ಸಂಸ್ಕಾರ ವಿದ್ಯೇ
- **4:00 - 5:00** ಆತ್ಮವಿದ್ಯೆ
- **5:00 - 6:00** ಶಸ್ತ್ರವಿದ್ಯೆ
- **6:00 - 7:00** ಗಂಧರ್ವವಿದ್ಯೆ

**ಮೌನವ್ರತ**

- 1 ಸಂಸ್ಕಾರವಿದ್ಯೆ ☐
- ☐ ನಿಯಮವ್ರತ
- ☐ ತತ್ವವ್ರತ
- ☐ ಆರಾಧ್ಯದೈವ & ಆಧ್ಯಾತ್ಮಿಕಗುರು
- ☐ ಸಂಬಧಿಕರು & ಸ್ನೇಹಿತರು
- ☐ ಪಂಚಮೈತ್ರಿ ಗುರುಕುಲ

**ಸಾಯಂವ್ರತ**

- **6:00 - 7:00** ಶಸ್ತ್ರವಿದ್ಯೆ
- **7:00 - 8:00** ಗಂಧರ್ವವಿದ್ಯೆ
- **8:00 - 9:00** ಸಂಸ್ಕಾರವಿದ್ಯೆ
- **9:00 - 3:00** ಯೋಗನಿದ್ರೆ

### ಅಗ್ನಿಪಥವ್ರತ

**ಸುಪ್ರಭಾತವ್ರತ**

- **3:00 - 4:00** ಸಂಸ್ಕಾರ ವಿದ್ಯೇ
- **4:00 - 5:00** ಆತ್ಮವಿದ್ಯೆ
- **5:00 - 6:00** ಶಸ್ತ್ರವಿದ್ಯೆ
- **6:00 - 7:00** ಗಂಧರ್ವವಿದ್ಯೆ

**ಮೌನವ್ರತ**

- 2 ಶಾಸ್ತ್ರವಿದ್ಯೆ ☐
  - ☐ ಧರ್ಮಶಾಸ್ತ್ರ
  - ☐ ಭಾಷಾಶಾಸ್ತ್ರ
  - ☐ ಗಣಿತಶಾಸ್ತ್ರ
  - ☐ ವಿಜ್ಞಾನಶಾಸ್ತ್ರ
  - ☐ ಜ್ಞಾನಶಾಸ್ತ್ರ
- 3 ಗಂಧರ್ವವಿದ್ಯೆ ☐
  - ☐ ಸಂಗೀತವಿದ್ಯಾ
  - ☐ ನೃತ್ಯವಿದ್ಯಾ
  - ☐ ನಟನಾವಿದ್ಯಾ
  - ☐ ಚಿತ್ರಶಿಲ್ಪಶಾಸ್ತ್ರ
  - ☐ ಚಲನಚಿತ್ರ
- 4 ಶಸ್ತ್ರವಿದ್ಯೆ ☐
  - ☐ ವೇಗ್ವಿದ್ಯಾ
  - ☐ ಮಣಿತ್ವಿದ್ಯಾ
  - ☐ ಧಾಢ್ಯಗ್ವಿದ್ಯಾ
  - ☐ ಮರ್ಕಟವಿದ್ಯಾ
  - ☐ ಆಯುಧಾತ್ಮರಕ್ಷಣ್ವಿದ್ಯಾ

**ಸಾಯಂವ್ರತ**

- **6:00 - 7:00** ಶಸ್ತ್ರವಿದ್ಯೆ
- **7:00 - 8:00** ಗಂಧರ್ವವಿದ್ಯೆ
- **8:00 - 9:00** ಸಂಸ್ಕಾರವಿದ್ಯೆ
- **9:00 - 3:00** ಯೋಗನಿದ್ರೆ

### ವಿಜಯೀವ್ರತ

**ಸುಪ್ರಭಾತವ್ರತ**

- **3:00 - 4:00** ಸಂಸ್ಕಾರ ವಿದ್ಯೇ
- **4:00 - 5:00** ಆತ್ಮವಿದ್ಯೆ
- **5:00 - 6:00** ಶಸ್ತ್ರವಿದ್ಯೆ
- **6:00 - 7:00** ಗಂಧರ್ವವಿದ್ಯೆ

**ಮೌನವ್ರತ**

- 5 ಆತ್ಮವಿದ್ಯೆ ☐
- ☐ ಪ್ರಾಣಾಯಾಮ
- ☐ ಧ್ಯಾನ
- ☐ ತ್ರಾಟಕ
- ☐ ಅಷ್ಟಸಿದ್ಧಿ & ನವನಿಧಿ
- ☐ ಪರಬ್ರಹ್ಮ ಸಿದ್ಧಿ

**ಸಾಯಂವ್ರತ**

- **6:00 - 7:00** ಶಸ್ತ್ರವಿದ್ಯೆ
- **7:00 - 8:00** ಗಂಧರ್ವವಿದ್ಯೆ
- **8:00 - 9:00** ಸಂಸ್ಕಾರವಿದ್ಯೆ
- **9:00 - 3:00** ಯೋಗನಿದ್ರೆ

# 5 ಚತುರಾಶ್ರಮವ್ರತ






ಆಶ್ರಮ : ಬ್ರಹ್ಮಚರ್ಯಾಶ್ರಮ
ಅವಧಿ : 01-25
ಕರ್ತವ್ಯ : ☐ ಸ್ವಯಂ ಸೇವಕವ್ರತ
☐ ಅಗ್ನಿಪಥವ್ರತ
☐ ವಿಜಯೀವ್ರತ

ವಿಜಯೀ ವ್ರತ ಸಂಪನ್ನಗೊಳಿಸಿದರೆ ಈ ಬ್ರಹ್ಮಚರ್ಯ ಆಶ್ರಮದಲ್ಲಿ ಉತ್ತೀರ್ಣನಾದಂತೆ. ಈ ಉತೀರ್ಣನಾದ ವ್ರತಧಾರಿ ಅಗ್ನಿಗುರುಕುಲದ ಶ್ರೇಷ್ಠ ವಿದ್ಯಾರ್ಥಿಗಳಲೊಬ್ಬ ನಾಗುವುದಲ್ಲದೆ ದೈವತ್ವವನ್ನು ಸಂಪಾದಿಸುವನು. ನಂತರ ಇಪ್ಪತ್ತಾರಣೆಯ ಸಂವತ್ಸರದಲ್ಲಿ ಗೃಹಸ್ಥಾಶ್ರಮಕ್ಕೆ ಪ್ರವೇಶವಾಗುತ್ತದೆ.

ಸೃಷ್ಠಿ ಚೈತನ್ಯ ಸ್ವರೂಪಿನಿಯಾದ ಶ್ರೀ ಲಕ್ಷ್ಮೀಸ್ವರೂಪಿ ಸ್ತ್ರೀಯೊಂದಿಗೆ ವಿವಾಹವಾಗಿ ದಾಂಪತ್ಯ ಜೀವನವನ್ನು ಧರ್ಮಮಾರ್ಗದಲ್ಲಿ ಕಳೆಯುತ್ತ ಕರ್ಮಯೋಗವ್ರತವಾದ ಸುಜೀವನವ್ರತ ಆಚರಿಸಬೇಕು. ಕರ್ಮಯೋಗವು ಧರ್ಮಪರವಾಗಿರ ಬೇಕು. ಮಕ್ಕಳ ಬ್ರಹ್ಮಚರ್ಯಾಶ್ರಮಕ್ಕೆ ಬೇಕಾಗುವ ಸೌಕರ್ಯ ಕಲ್ಪಿಸುವುದು ಅವರ ವ್ರತ ಸಂಪನ್ನತೆಗಾಗಿಯೇ ನಾವು ಸಂಪತ್ತನ್ನುಗಳಿಸಿರ ಬೇಕು.



ಆಶ್ರಮ : ಗೃಹಸ್ಥಾಶ್ರಮ
ಅವಧಿ : 26-50
ಕರ್ತವ್ಯ : ☐ ಸುಜೀವನವ್ರತ

### ಗೃ ಹ ಸ್ಥಾ ಶ್ರ ಮ : ಸು ಜೀ ವ ನ ವ್ರ ತ

- ☐ ಜೀವನೋಪಾಯ
  - ☐ ಅವಶ್ಯ ಸಾಮಗ್ರಿಗಳ ಖರೀದಿ
  - ☐ ಶ್ರೀ ಧನಲಕ್ಷ್ಮೀನಿಧಿ
  - ☐ ಶ್ರೀ ಹರಿನಿವಾಸ
  - ☐ ಶ್ರೀ ಭುದೇವಿ ಸಂಪತ್ತು
  - ☐ ಶ್ರೀ ಗೋಮಾತಾ ಸಂಪತ್ತು
- ☐ ಸಮಾಜ ಸೇವೆ
- ☐ ಕೃಷಿ
- ☐ ವ್ಯಾಪಾರ
- ☐ ಮಾಧ್ಯಮ (ಚಲನಚಿತ್ರ|ಪುಸ್ತಕ| ಅಂತರ್ಜಾಲ)



ಆಶ್ರಮ : ವಾನಪ್ರಸ್ಥಾಶ್ರಮ
ಅವಧಿ : 51-75
ಕರ್ತವ್ಯ : ☐ ವಿಶ್ವವಿಜಯೀ ವ್ರತ

### ವಾನಪ್ರಸ್ಥಾಶ್ರಮ : ವಿಶ್ವವಿಜಯೀವ್ರತ

ವಿಶ್ವವಿಜಯೀ ವ್ರತವು ವಿಶ್ವಜಿತ್ ವ್ರತಾಂಶವಾಗಿದೆ. ಸಂಪೂರ್ಣ ಭೂಮಂಡಲದಲ್ಲಿ ಧರ್ಮದ ಉಳಿವಿಗಾಗಿ ಉಚಿತ ನಿರ್ಧಾರಗಳನ್ನು ಕೈಗೆತ್ತಿಕೊಂಡು ಕಾರ್ಯರೂಪಕ್ಕೆ ತಂದು ಯಶಸ್ವಿಯಾಗ ಬೇಕು. ಪ್ರಕೃತಿ, ಸಂಸ್ಕೃತಿಯ ಸುವ್ಯವಸ್ಥೆ ಕಾಪಾಡುವ ಜೀವನ ಸಾರ್ಥಕತೆಯ ಹಂತ.



ಆಶ್ರಮ : ಸನ್ಯಾಶ್ರಮ
ಅವಧಿ : 76-_
ಕರ್ತವ್ಯ : ☐ ಸತ್ಯಯುಗ ಸೃಷ್ಟಿ ಸಂಕಲ್ಪವ್ರತ

### ಸನ್ಯಾಸಾಶ್ರಮ : ಸತ್ಯಯುಗ ಸೃಷ್ಟಿ ಸಂಕಲ್ಪವ್ರತ

ಧರ್ಮದ ನಾಲ್ಕು ಚರಣಗಳ ಪಾವಿತ್ರ್ಯ ಅರಿತು ಜೀವನದಲ್ಲಿ ಅಳವಡಿಸಿಕೊಂಡು ಬಾಳುವ ಸುಸಂಸ್ಕೃತ ಸಮಾಜ ನಿರ್ಮಾನವೇ ಸತ್ಯಯುಗ ಸೃಷ್ಠಿ ಸಂಕಲ್ಪವ್ರತ.

ಚತುರ್ + ಆಶ್ರಮ = ಚತುರಾಶ್ರಮ. ಚತುರ್ ನಾಲ್ಕು ಮತ್ತು ಆಶ್ರಮ ಆಶ್ರಯದಲ್ಲಿ ಮಾಡುವ ಕೆಲಸ, ಕರ್ತವ್ಯ, ಶ್ರಮವನ್ನೆ ಆಶ್ರಮ ಎನ್ನುವರು.

ಜನ್ಮದೊಂದಿಗೆ ಬ್ರಹ್ಮಚರ್ಯ ಆಶ್ರಮವು ಪ್ರಾರಂಭಗೊಂಡು ಆ ವ್ರತಧಾರಿಯ ಇಪ್ಪತ್ತೈದನೇಯ ಸಂವತ್ಸರದವರೆಗೂ ಪಾಲಿಸಲ್ಪಡುವುದು. ಬ್ರಹ್ಮಚರ್ಯಾಶ್ರಮವು ಅಧ್ಯಯನಕ್ಕೆ ಮೀಸಲಾಗಿರುತ್ತದೆ. ಬ್ರಹ್ಮಚರ್ಯಾಶ್ರಮದ ಅವಧಿಯಲ್ಲಿ ಕ್ರಮ ಬದ್ಧವಾಗಿ ಸ್ವಯಂ ಸೇವಕ ವ್ರತ, ಅಗ್ನಿಪಥವ್ರತ ಮತ್ತು ವಿಜಯೀ ವ್ರತಗಳನ್ನು ಇಪ್ಪತ್ತೈದು ಸಂವತ್ಸರಗಳೊಳಗೆ ಸಂಪೂರ್ಣಗೊಳಿಸ ಬೇಕು.

ವೇಕುಂಠ ವೈಭವವನ್ನು ಪ್ರಕೃತಿ ಮಾತೆ ಸವಿಯುವಂತೆ ಮಾಡುವ ಪುತ್ರನೆ ಕೀಪುಮಾ ಸಮರಕಲೆಯ ನಿಜವಾದ ವ್ರತಧಾರಿ. ಸಂಪೂರ್ಣ ಮಾನವ ಜೀವನಕ್ಕೆ ಸನ್ಮಾರ್ಗ ಈ ನಿಯಮ ಮತ್ತು ತತ್ವವ್ರತಗಳಾಗಿವೆ.






## 3 ಆರಾಧ್ಯದೈವ & ಆಧ್ಯಾತ್ಮಿಕಗುರು

**ಆರಾಧ್ಯದೈವ ಮತ್ತು ಆಧ್ಯಾತ್ಮಿಕ ಗುರು ಎಂಬುದು ಸಂಸ್ಕಾರ ವಿದ್ಯೆಯ ಚೈತನ್ಯ ಜ್ಞಾನ.**































ಕೀಪುಮಾ ಸತ್ಕಾರ್ಯಕ್ಕೆ ಸನ್ಮಾರ್ಗಪಾಲಿಪ ಕೀಪುಮಾ ವ್ರಥಸ್ವರೂಪನೆ ಆರಾಧ್ಯದೈವ. ಈ ಕೀಪುಮಾ ಮಾರ್ಗತೋರಿ ಮುಕ್ತಿಯ ಸನ್ಮಾರ್ಗ ಸಾಧಿಸಲು ಪ್ರೇರಣೆ ನೀಡುವಾತನೆ ಆಧ್ಯಾತ್ಮಿಕ ಗುರು. ಕೀಪುಮಾ ಸತ್ಕಾರ್ಯಕ್ಕೆಂದೆ ಶ್ರೀ ವಿಷ್ಣು ದಶಾವತಾರ ಶಾಪದ ಫಲವಾಗಿ ಶಾಪ ವಿಮೋಚನಾರ್ಥ ಮನುಕುಲ, ಪ್ರಕೃತಿ, ಸಂಸ್ಕೃತಿಯ ಪಾಲನಕರ್ಥ ರಕ್ಷಕನಾಗಿ ಕೀಪ ಉಮಾ ಕಾರ್ಯಯಶಸ್ವಿಯಾದ ನಮ್ಮ ಶ್ರೀ ಹರಿಯೇ ನಮ್ಮ ಆರಾಧ್ಯದೈವ.

ಅನಂತ ಬ್ರಹ್ಮಾಂಡದ ಆತ್ಮಪರಬ್ರಹ್ಮ ಜ್ಯೋತಿಸ್ವರೂಪ ಚೈತನ್ಯವೇ ನಮ್ಮ ಶ್ರೀ ಹರಿ. ಸೃಷ್ಠೀಯ ಸಂಪೂರ್ಣ ಪಾಲನಾಶಕ್ತಿಯೇ ನಮ್ಮ ಪ್ರಭು. ಆತ್ಮಪರಬ್ರಹ್ಮವನ್ನು ಬ್ರಹ್ಮಪಧಾರ್ಥ ಎನ್ನುವರು. ಕಾರಣ ಬ್ರಹ್ಮ ಸೃಷ್ಠಿಗೆ ಕಾರಣವಾದ ಪಂಚಭುತಗಳ ಸೃಷ್ಠಿಯು ಬ್ರಹ್ಮಪದಾರ್ಥದಿಂದಲೇ ಆದಕಾರಣ ಬ್ರಹ್ಮೋತ್ಪತ್ತಿಗೆ ಶ್ರೀ ವಲ್ಲಭನೇ ಕಾರಣಕರ್ಥ. ಪಂಚಭೋತಗಳಿಂದ ಸೃಷ್ಠಿಯಾದ 'ಬ್ರಹ್ಮ'ವನ್ನು ವಿನಾಶಗೂಳಿಸಿ ಮರಳಿ ಪಂಚಭೂತಗಳಲ್ಲಿ ವಿಭಾಗಿಸಿ ಬ್ರಹ್ಮಪದಾರ್ಥ ಸ್ಥಿತಿಗೆ ಮರಳಿಸುವ ಮುಕ್ತಿಧಾತ ಶಿವನು ಬ್ರಹ್ಮಪದಾರ್ಥವಾದ ನಮ್ಮ ಶ್ರೀ ನಾರಾಯನನ ಪರಬ್ರಹ್ಮಶಕ್ತಿ ಸ್ವರೂಪ ಶಿವನಿಗೂ ಆರಾಧ್ಧ್ಯದೈವ ನಮ್ಮ ಪ್ರಭು. ಈ ಸಂಪೂರ್ಣ ಬ್ರಹ್ಮಾಂಡದ ನಾಯಕ ನಮ್ಮ ಆರಾಧ್ಧ್ಯ ಶ್ರೀ ಲಕ್ಷ್ಮೀನಾರಾಯನ.

ಬೃಗುವಿನ ಪ್ರಶ್ನೆಯಾದ ಶ್ರೇಷ್ಠ ದೇವತೆಯಾರು?, ಎಂಬ ನಿರ್ಣಯದ ಪರೀಕ್ಷೆಯಲ್ಲಿ ಬ್ರಹ್ಮಪದಾರ್ಥ(ವಿಷ್ಣು), ಬ್ರಹ್ಮ ಮತ್ತು ಕಾಯ(ಶಿವ) ಸ್ವರೂಪ ಶಕ್ತಿಗಳಲ್ಲಿ ಕಾಯವು ವಿನಾಶಕ್ಕಾಗಿ ಅರಿಷಡ್ವರ್ಗ ಸ್ವರೂಪವಾದ ಕಾರಣ ಲಿಂಗರೂಪದಲ್ಲಿ ಪೂಜಿಸುವಂತೆ ಮತ್ತು ಬ್ರಹ್ಮಪಂಚಭೂತ ಸ್ವರೂಪದ ರೂಪಕ್ಕೆ ರೂಪವಾದ್ದರಿಂದ ಕಾಯದ ಪುಜೆಯೆ ಮರಳಿ ನಡೆಯುವುದೇ ಹೂರತು ಬ್ರಹ್ಮ ಪುಜೆ ಅಸಾಧ್ಯ. ಇನ್ನು ಸರ್ವಕಾರಣ ಸೃಷ್ಠಿಪಾಲನ ಜ್ಯೋತಿಸ್ವರೂಪ ಪಂಚಭೂತ ಅಂತರಾತ್ಮ ಶ್ರೀ ವಿಷ್ಣು ಸರ್ವಸೃಷ್ಠಿ ಪರಮಾತ್ಮನಾದ್ದರಿಂದ ಈ ಸೃಷ್ಠಿಯೇ ಪೂಜಿಸಲು ಅರ್ಹವಾಗಿರುವುದರಿಂದ ಸೃಷ್ಠಿಯ ಕಲ್ಯಾಣ ಈ ನಮ್ಮ ಪ್ರಭುವಿಂದಲೇ ಸಾಧ್ಯವಾಗಿದ್ದರು ಕಮಲನಾಭ ಶ್ರೀ ಲಕ್ಷ್ಮೀಯೊಂದಿಗೆ ವೈಕುಂಠದಲ್ಲಿ ಚಿಂತಾಹೀನನಾಗಿ ಕುಳಿತಿದ್ದು ಸೃಷ್ಠಿಯಲ್ಲಿನ ಅಧರ್ಮನ ದಬ್ಬಾಳಿಕೆಯನ್ನು ಕೊಣೆಗಾನಿಸ ಬೇಕಾದ ಈ ವಿಷ್ಣು ಕಾರ್ಯ ಹೀನನಾಗಿರುವನೆಂದು ಕೋಪದಿಂದ ಎದೆಗೆ ಒದ್ದು ಎಚ್ಚರಿಸಿ ದಶಾವತಾರದಲ್ಲಿ ಮೃತ್ಯುಲೋಕದ ಅಧರ್ಮನ ನಾಶಗೊಳಿಸುವ ಶಾಪನೀಡಿದನು.

ಶ್ರೀಹರಿಯು ಮುಂದೆ ಮತ್ಸಾವತಾರಿ ಮನುವಾಗಿ ಮಾನವರಿಗೆ ಮನುಸ್ಮೃತಿ ನೀಡಿದ. ಕುರ್ಮವಾಗಿ ಧರ್ಮಜರಿಗೆ ಅಮೃತಕಲಶ ನೀಡಿ ಚಿರಂಜೀವಿಗಳಾಗಿಸಿದ. ವರಾಹನಾಗಿ ಪ್ರಕೃತಿ ವಲ್ಲಭನಾದ. ನರಸಿಂಹನಾಗಿ ಭಕ್ತ ಪ್ರಹಲ್ಲಾದನ ಸಂಕಟ ನಿವಾರಿಸಿದ. ವಾಮನನಾಗಿ ಮಾನವನ ಅಹಂ ನಿವಾರಿಸಿ ದಾನವರಿಂದ ಈ ಭುಮಿಯನ್ನೆ ದಾನವಾಗಿ ಪಡೆದು ದಾನವರನ್ನು ಪಾತಾಳ ಲೋಕಕ್ಕೆ ಕಳುಹಿಸಿದ. ಪ್ರಜಾ ಪ್ರಭುವಾದ ಕ್ಷತ್ರಿಯರೇ ಅಧರ್ಮನ ಭಾವಕ್ಕೊಳಗಾಗಿ ಅಧರ್ಮಿಗಳಾದ ಇವರನ್ನು ಪರಶುಹಿಡಿದ ಪರಶುರಾಮನಾಗಿ ಸಂಹರಿಸಿದ.








































ಕ್ಷತ್ರೀಯನಾದ ಅರಸನು, ಅಧರ್ಮದ ವಿರುದ್ಧ ಹೊರಾಡಿ ಪ್ರಜೆಗಳ ಪಾಲನೆಯನ್ನು ಮಾಡುವ ಮಾರ್ಗವನ್ನು, ರಾಜರಿಗೆ ಪ್ರಜಾಪ್ರಭು ಶ್ರೀ ರಾಮನಾಗಿ ಭೋದಿಸಿದ.

ರಾಜಮನೆತನದಲ್ಲೆ ಅಧರ್ಮದಿಂದ, ನೋವನುಭವಿಸಿದ ರಾಣಿಯರಿಗೆ, ಧರ್ಮದಾಸರೆಯಾಗಿ, ಅಧರ್ಮಿ ವಂಶಜರ ವಿನಾಶಗೈದ. ಪಾಂಡವರಿಂದ ಧರ್ಮಮಾರ್ಗದಲ್ಲಿ ಆಡಳಿತ ಸ್ಥಾಪಿಸಿದ. ಪಾತಾಳದಿಂದ ಕಾಲಧರ್ಮಾನುಸಾರ ದ್ವಾಪರಯುಗದ ಅಂತ್ಯಕಾಲದಲ್ಲಿ ಮರಳಿದ ಕಲಿಯ ಕುತಂತ್ರಕ್ಕೆ ವೈಕುಂಟ ತಲುಪದ ಸ್ಥಿತಿಗೆ ಬಂದ ಕೃಷ್ಣನ ಆತ್ಮಜ್ಯೋತಿ ಪುರಿಯಲ್ಲಿ ಕಲ್ಕಿಗಾಗಿ ಕಾಯುತ್ತಿದೆ. ಕೃಷ್ಣನ ಈ ಸ್ಥಿತಿಯನ್ನು ಗಮನಿಸಿದ ಅಣ್ಣ ಬಲರಾಮ ತಮ್ಮನ ಧರ್ಮಸ್ಥಾಪನಾ ಕಾರ್ಯಕ್ಕೆ ಪ್ರಜೆಗಳನ್ನು ಗುರಿಯಾಗಿಸಿದ ಅಧರ್ಮನ ವಂಶಜ ಕಲಿಯ ನಿಗ್ರಹಕ್ಕೆ ಕೃಷಿಯತ್ತ ಜನರಮನ ಸೆಳೆದು ವ್ಯವಸಾಯಕ್ಕೆ ಕರೆನೀಡಿ ಎಲ್ಲಾರಾಜರಿಗೂ ಕಾಯಕ ಯೋಗವನ್ನು ಮಾಡಲು ಪ್ರಜೆಗಳಿಗೆ ಪ್ರೇರನೆ ನೀಡಿ, ಇಂದು ಅವನು ಕಲ್ಕಿಯ ಬರುವಿಕೆಗೆ ಶಂಬಲದಲ್ಲಿ ಕಾಯುತಿದ್ದಾನೆ.

ಭಾರತೀಯರಿಗೆ ಈ ರಾಕ್ಷಸೀ ಸ್ವರೂಪಿ ಅಧರ್ಮನ ವಂಶಜ ರಾಕ್ಷಸರ ಕುರಿತು ಮಾಹಿತಿ ಇದ್ದಕಾರಣ ಧರ್ಮದ ಸಂಸ್ಕಾರವನ್ನು ಅಳವಡಿಸಿ ಕೊಂಡೆ ಬದುಕುತಿದ್ದರು. ಅಧರ್ಮಪ್ರೇರಿತ ಗುಂಪುಗಳ ದಾಳಿಗಳಿಂದ ಗುಲಾಮಗಿರಿಯಲ್ಲಿ ಇಂದು ಭಾರತೀಯ ಜನರು ಕಲಿಯ ಕರಿನೆರಳಲ್ಲಿ ಬಾಳುತಿದ್ದಾರೆ.

ಕಲಿಯ ಅಂತ್ಯಕ್ಕೆ ಸಿದ್ದನಿರುವ ನೀನು ಕಲ್ಕೀಯ ಆತ್ಮಾಂಶನೆ?. ಹೌದು ಎಂದಾದರೆ ಮರಿಯದೆ ಮಾಯಾಳಿಗೆ ಮರುಳಾಗದೆ, ನಿನ್ನ ಆರಾಧ್ಯದೈವನ್ನು ನಿನ್ನ ಅಂತರಂಗವನ್ನಾಗಿಸು.

# ಆಧ್ಯಾತ್ಮಿಕಗುರು

ಮಾನವನ ಸೃಷ್ಠಿಯ ಮೂಲ ಉದ್ದೇಶವನ್ನು ಭೋದಿಸಿ, ನಮ್ಮನ್ನು ವೈಕುಂಠದತ್ತ ಮುಖಮಾಡಿಸ ಬಲ್ಲ ಸನ್ಮಾರ್ಗ ತೋರಿಸೋ ದಿವ್ಯ ಚೈತನ್ಯವಂತನೇ ಆಧ್ಯಾತ್ಮಿಕಗುರು.

01) ವಟು
02) ಶಿಶ್ಯ
03) ಗುರು
04) ಮಹಾಗುರು
05) ಆಧ್ಯಾತ್ಮಿಕಗುರು

ಯಾವುದೇ ವಿದ್ಯೆಯನ್ನು ಶಾಸ್ತ್ರಭದ್ದವಾಗಿ ಅಧ್ಯಯನ ಮಾಡದಿರುವ ಮಾನವ/ಪ್ರಾಣಿ ವಟು ಎನಿಸಿ ಕೊಳ್ಳುತ್ತದೆ. ಅಧರ್ಮನಿಗೆ ಅನಾಯಾಸವಾಗಿ ಸಿಗುವ ಸಂಪನ್ಮೂಲ ಪ್ರಾಣಿಗಳು ಇವರೇ.

ಶಾಸ್ತ್ರಭದ್ದವಾಗಿ ವಿದ್ಯೆಯನ್ನು ಅಧ್ಯಯನ ಮಾಡಲು ಬಯಸಿದವ ಶಿಶ್ಯ. ಅಧರ್ಮನ ದಾಸ್ಯದಿಂದ ಹೂರಬರುವ ಹಂತವಿದು.

ಶಾಸ್ತ್ರಭದ್ದ ವಿಷಯಗಳ ಅದ್ಯಯನದಿಂದ ಜೀವನ ರೂಪಿಸಿ ಕೊಡಬಲ್ಲ ಜ್ಞಾನಗಳಸಿದಾತ ಗುರು. ಅಧರ್ಮನಿಗೆ ಸವಾಲಾಗುವ ಅಥವಾ ಸೋಲುವ ಹಂತ.

ಶಾಸ್ತ್ರಭದ್ದ ವಿಷಯಗಳ ಅದ್ಯಯನದಿಂದ, ತನ್ನ ಮತ್ತು ತನ್ನ ವಿದ್ಯಾರ್ಥಿಗಳ ಜೀವನ ರೂಪಿಸಿ ಕೂಡಬಲ್ಲ ಜ್ಞಾನಗಳಸಿ ಅಧರ್ಮಕ್ಕೆ ಸವಾಲಾದ ವ್ಯಕ್ತಿ ಮಹಾಗುರು.

ಶಾಸ್ತ್ರಭದ್ಧ ವಿದ್ಯೆಗಳ, ವಿದ್ಯಾಪಾರಂಗತನಾದ ಇವನು, ಅಧರ್ಮದ ಕಡುವೈರಿಯಾಗಿರುವವನು. ಅಧರ್ಮದ ಸರ್ವನಾಶಕ್ಕೆಂದೆ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವವನಿಗೆ ಆಧ್ಯಾತ್ಮಿಕಗುರು ಎನ್ನುವರು.



# 4 ಸಂಭಂದಿಕರು & ಸ್ನೇಹಿತರು








## ಸಂಭಂಧಿಕರು

1. ಮಾತಾ & ಪಿತೃ
2. ಸಹೋದರ & ಸಹೋದರಿ
3. ರಕ್ತಸಂಭಂದಿಗಳು
4. ಬಂಧುಗಳು
5. ಗಂಡ & ಹೆಂಡತಿ

## ಸ್ನೇಹಿತರು

ಮೈ ನೆರೆಯದ ಹೆಣ್ಣು ಮಗಳು, ಹನ್ನೆರಡು ವರ್ಷದೊಳಗಿನ ಗಂಡು ಮಕ್ಕಳು ಮಾತ್ರ ನಮ್ಮ ಸ್ನೇಹಿತರಾಗ ಬೇಕು. ಇನ್ನುಳಿದವರು ನಮ್ಮ ಆಧ್ಯಾತ್ಮಿಕ ಗುರು ಅಥವಾ ಮಹಾಗುರುಗಳಾಗಿರ ಬೇಕು.

ಸಂಭಂದಿಕರಲ್ಲೇ ಶ್ರೇಷ್ಠ ಸಂಭಂದ ತಂದೆ-ತಾಯಿ ಸಂಬಂಧ. ನಮ್ಮ ಬ್ರಹ್ಮ ಸ್ವರೂಪಿ ಈ ಶರೀರ ಪ್ರಕೃತಿಗೆ ಜನ್ಮದಾತರು ತಂದೆ - ತಾಯಿ. ಈ ಮಹಾತ್ಮರೇ ನಮ್ಮ ಆಧ್ಯಾತ್ಮಿಕ ಗುರುವಾದರೆ ನಮ್ಮ ಜನ್ಮ ಸಾರ್ಥಕ. ಒಡಹುಟ್ಟಿದವರೊಡನೆ ಮುಕ್ತಿಮಾರ್ಗದತ್ತ ಸಾಗೋ ಭಾಗ್ಯ ನಿಜವಾದ ಸೌಭಾಗ್ಯ. ಇನ್ನುಳಿದ ಸಂಬಂಧಿಕರು ನಮ್ಮ ಆಧ್ಯಾತ್ಮಿಕ ಗುರುವಾದರೆ ನಮ್ಮ ಜೀವನ ಪಾವನ. ನಮ್ಮ ಬಗ್ಗೆ ಒಳ್ಳೆಯ ಪ್ರೇಮ ಭಾವವಿರುವ ಸಂಬಂದಿಕರು ಅಧರ್ಮದ ವಿರೋಧಿಗಳಾದರೆ ಸ್ವರ್ಗವೇ ಅವರ ಮನೆತನ ವಾಗುವುದು.

ಸಂಬಂಧಿಕರ ಪಟ್ಟಿಯಲ್ಲಿರದ ಇನ್ನೀತರರಿಗೆ ಸ್ನೇಹಿತರೆನ್ನುತ್ತಾರೆ. ಮೈ ನೆರೆಯದ ಮತ್ತು ಹನ್ನೆರಡು ವರ್ಷದಾಟದವರು ಮಾತ್ರ ನಮ್ಮ ಸ್ನೇಹಿತರಾಗ ಬೇಕು. ಇನ್ನುಳಿದವರು ಆಧ್ಯಾತ್ಮಿಕ ಗುರುಗಳಾಗಿರ ಬೇಕು. ಇವರನ್ನು ಹೊರತು ಪಡಿಸಿ ಮಿಕ್ಕವರ ಸಂಘ ಅಧರ್ಮಕ್ಕೆ ದಾರಿ ಮಾಡಿಕೊಡುತ್ತದೆ.

ಎಚ್ಚರ!





# 5 ಪಂಚಮೈತ್ರಿ ಗುರುಕುಲ




ಪಂಚ ಅಂದರೆ ಐದು ಮತ್ತು ಮೈತ್ರಿ ಅರ್ಥ ಒಕ್ಕೂಟ. ನಮ್ಮ ದೇಶ ಉಪಖಂಡವಾಗಿದ್ದು ಸರ್ವವಿಧದ ವಾತಾವರಣ ನಮ್ಮ ದೇಶದಲ್ಲಿ ಇರುವ ಕಾರಣ ನಮ್ಮ ದೇಶದಲ್ಲಿ ಪಂಚಮೈತ್ರಿ ಗುರಪಕುಲಗಳ ಸ್ಥಾಪನೆಯನ್ನು ಶ್ರೀ ಕಲ್ಕಿಭಗವಂತ ಮಾಡುವನು. ಅವುಗಳನ್ನು ಕೀಪ ಉಮಾ (ಸಂಸ್ಕೃತಿ ರಕ್ಷಣೆ) ಗಾಗೆ ಸ್ಥಾಪಿಸುವನು.

ಶ್ರೀ ಕಲ್ಕೀ ಭಗವಾನ್ ಎಂದರೆ ಕಲ್ ನಾಳೇ ಕೀ ರಕ್ಷಕ ಭಗವಾನ್ ಭಗವಂತ ಒಟ್ಟಾರೆಯಾಗಿ ಭವಿಷ್ಯದ ರಕ್ಷಕ ಭಗವಂತ ಎಂಬ ಅರ್ಥ. ಭವಿಷ್ಯಪುರಾಣದ ಉಲ್ಲೇಖದಂತೆ ಶ್ರೀ ಕಲ್ಕಿಯ ಜನನ ದಕ್ಷಿಣ ಭಾರತದಲ್ಲಾಗಿದೆ. ಇನ್ನು ಅವನ ಆತ್ಮಶಕ್ತಿಯ ಜಾಗೃತಿಯು ಮಹೇಂದ್ರ ಪರ್ವತದಲ್ಲಿ ವಿರಾಜಮಾನವಾಗಿರುವ ಶಾಂ ಬಲವೆಂಬ ರಾಜ್ಯ ದಶದಿಕ್ಕಲಿ ಗೋಚರಿಸದ ಸ್ಥಾನದಲ್ಲಿ ಇರುವುದು. ತ್ರಿನೇತ್ರ ಜಾಗೃತಿಯೇ ಈ ಸ್ಥಳ ಅನ್ವೇಶನೆಯ ಮಾರ್ಗ. ಈ ಮಹೇಂದ್ರ ಪರ್ವತವು ಶಾಂ ಬಲ_ಕ್ಕೆ ಹೋಗಲು ಪ್ರವೇಶದ್ವಾರ. ಇದರ ರಕ್ಷಣೆಯನ್ನು ಶ್ರೀ ಪರಶುರಾಮರು ಮಾಡುತಿದ್ದಾರೆ. ಮಹೇಂದ್ರ ಪರ್ವತ ಪ್ರವೇಶಿಸಿದ ನಂತರ ಶ್ರೀ ಭಾರ್ಗವ ಪರಶುರಾಮರಿಂದ ಶಿಕ್ಷಣಪಡೆದು ಸಾವಿರ ಸೂರ್ಯರ ಸೃಷ್ಠಿಸುವಷ್ಟು ಆತ್ಮಶಕ್ತಿಪಡೆದ ನಂತರವೇ ಶಾಂ ಬಲಕ್ಕೆ ಪ್ರವೇಶ ದೊರಕುವುದು.

ಶಾಂ ಬಲ ಅಂದರೇ ಸಪ್ತ ಋಷಿಗಳಾದಿ ದೇವತೆಗಳಿಂದ ನಿರ್ಮಿತ ಸತ್ಯಯುಗ ಸೃಷ್ಠಿಕಾರಣ ಕರ್ಥ ಜ್ಯೋತಿಸ್ವರೂಪ ವಿಷ್ಣುವಿನ ಇನ್ನೊಂದು ನಾಮಧೆಯ ಶಾಂ. ಬಲ - ಶಕ್ತಿಯಾಗಿರುತ್ತದೆ. ಶ್ರೀ ವಿಷ್ಣುವಿನ ಶಕ್ತಿಯೇ ಶಾಂಬಲ. ಪ್ರಥಮವಾಗಿ ಯಾರು ಈ ನಗರವನ್ನು ತಲುಪುವರೋ ಅವರೇ ಕಲ್ಕೀ. ಈ ನಗರವನ್ನು ತಲುಪೋ ಪ್ರತಿಯೋರ್ವರು ಶ್ರೀ ಕಲ್ಕಿಯೇ ಯಾಗಿರುತ್ತಾರೆ. ಕಲಿಯುಗದ ಈ ಕರಾಳತೆಯಲ್ಲಿ ಪ್ರಕೃತಿ, ಸಂಸ್ಕೃತಿಯ ಸರ್ವನಾಶಕ್ಕೆ ಸಿದ್ದರಿರುವ ಕಲಿಯವಜನತೆ ಕಲ್ಕಿಯಾಗುವುದು ಅಸಾಧ್ಯವಾದ ಮಾತು.

ಅದಕ್ಕಾಗಿ ನಿಮ್ಮ ಪ್ರಯತ್ನ ವೈಕುಂಠದತ್ತ ಸಾಗಲಿ. ಶಾಂಬಲ ತಲುಪಲೇ ಬೇಕೆಂದರು, ವೈಕುಂಟ ಸೇರಬೇಕೆಂದರು ಧರ್ಮಮಾರ್ಗವಂದೆ ಸನ್ಮಾರ್ಗ. ಅಧರ್ಮ ಮಾರ್ಗ ತೊಡೆದು ಧರ್ಮದ ಸನ್ಮಾರ್ಗ ಸಾರಲು ಇರುವ ಸಂಪೂರ್ಣ ಚತುರಾಶ್ರಮಗಳನ್ನು ಪಾಲಿಸುವ ಸುಸಂಸ್ಕಾರಿ ಸಮಾಜ ನಿರ್ಮಾಣವೇ ನಮ್ಮ ಗುರಿಯಾಗಿದ್ದು, ಕಲಿಯುಗದ ಅಂತ್ಯದಷ್ಟೊತ್ತಿಗೆ ವೈಕುಂಟವನ್ನು ತಲಪಲು ಮಾನವರಿಗೆ ಸನ್ಮಾರ್ಗ ನಮ್ಮ ಪಂಚಮೈತ್ರೀ ಗುರುಕುಲ.

ಪಂಚಮೈತ್ರೀ ಗುರುಕುಲಗಳು ಐದು ವಿದ್ಯಾಕೇಂದ್ರಗಳಾಗಿದ್ದು ಸಂಪೂರ್ಣ ಭಾರತದ ಆಡಳಿತ ಕಾರ್ಯಕಲಾಪಗಳಲ್ಲಿ ಸೇವೆಸಲ್ಲಿಸಿ ಪ್ರಜೆಗಳಿಗೆ ಸನ್ಮಾರ್ಗ ತೋರಿಸುವ ಗುರಿಹೊಂದಿವೆ.

| ಕ್ರ.ಸಂ | ಗುರುಕುಲ | ಆಶ್ರಮ | ಅಧ್ಯಯನ |
|---|---|---|---|
| ೧ | ಅಗ್ನಿಗುರುಕುಲ | ಬ್ರಹ್ಮಚರ್ಯ | ತ್ರೀವಿದ್ಯಾವ್ರತ |
| ೨ | ಪೃಥ್ವಿಗುರುಕುಲ | ಬ್ರಹ್ಮಚರ್ಯ | Army |
| ೩ | ವಾಯುಗುರುಕುಲ | ಬ್ರಹ್ಮಚರ್ಯ | Airforce |
| ೪ | ಅರ್ಘ್ಯಗುರುಕುಲ | ಬ್ರಹ್ಮಚರ್ಯ | Navy |
| ೫ | ಆಕಾಶಗುರುಕುಲ | ಗೃಹಸ್ಥ/ವಾನಪ್ರಸ್ತ | KPSC/UPSC/ Politics.... |

ಮನೆಯೇ ಮೋದಲ ಗುರುಕುಲ, ತಂದೆ ತಾಯಿಯೇ ಮೂದಲ ಗುರು. ತ್ರೀವಿದ್ಯಾವ್ರತಗಳಾದ ಸ್ವಯಂಸೇವಕ ವ್ರತ, ಅಗ್ನಿಪಥವ್ರತ ಮತ್ತು ವಿಜಯೀವ್ರತಗಳನ್ನು ಕ್ರಮವಾಗಿ ಆಧ್ಯಾತ್ಮಿಕ ಗುರುವಿನ ಮಾರ್ಗದರ್ಶನದಲ್ಲಿ ಅಧ್ಯಯನಮಾಡುವ ವಿದ್ಯಾ ಸ್ಥಾನವೇ ಅಗ್ನಿಗುರುಕುಲ. ಸುಜೀವನ ವ್ರತದ ಆದಾಯ ಮತ್ತು ಆಧುನಿಕ ಶಸ್ತ್ರಾಸ್ತ್ರಗಳ ಅಧ್ಯಯನಕ್ಕಾಗಿ ನಿರ್ಮಿತ ಅಗ್ನಿಪಥ ಸೇನಾ ತರಬೇತಿಯ ಗುರುಕುಲಗಳು: ಅರ್ಘ್ಯಗುರುಕುಲವು ಜಲಸೇನೆಯಾಗಿದೆ. ವಾಯುಗುರುಕುಲವು ವಾಯುಸೇನೆಯಾಗಿದೆ. ಪೃಥ್ವಿಗುರುಕುಲ ಭೂಸೇನೆಯಾಗಿದೆ. ನಾಲ್ಕುವರ್ಷದ ಸೇನಾತರಬೇತಿಯಲ್ಲಿ ಶಸ್ತ್ರಾಸ್ತ್ರ ಅಧ್ಯಯನ ಮಾಡಿ ಅಗ್ನಿಪಥವ್ರಥವನ್ನು ಪೂರ್ಣಗೊಳಿಸಿ, ವಿಜಯೀವ್ರತದಲ್ಲಿಯು ವಿಜಯೀಯಾಗ ಬೇಕು. ಆಕಾಶಗುರುಕುಲದ ಬಗ್ಗೆ ಸವಿಸ್ತಾರವಾಗಿ ನೋಡೊನ ಬನ್ನಿ.






ಆಕಾಶ ಗುರುಕುಲವು ೨೧ನೇ ಸಂವತ್ಸರದಿಂದ ತ್ರಿವಿದ್ಯಾವ್ರಥಗಳ ಸ್ವಯಂ ಅಧ್ಯಯನವನ್ನು ಮಾಡುವ ಸ್ಥಳವಾಗಿದೆ.

## ಬ್ರಹ್ಮಚರ್ಯಾಶ್ರಮ

| 0 | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 | 23 | 24 | 25 | 26 |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಸ್ವ ಯಂ ಸೇ ವ ಕ ವ್ರ ತ ಸಿ ದ್ಧಿ ಪ್ರಾ ಪ್ತಿ | | | | | | | | | | | | | | | | | | | ಅಗ್ನಿಪಥವ್ರಥ ಸಿದ್ಧಿ ಪ್ರಾಪ್ತಿ | | | | ವಿಜಯೀವ್ರತ ಸಿದ್ಧಿ ಪ್ರಾಪ್ತಿ | | | |

| | | |
|---|---|---|
| ಅಗ್ನಿಗುರುಕುಲ | 0-೧೮ರ ವರೆಗೆ ಅಗ್ನಿಗುರುಕುಲದಲ್ಲಿ ತ್ರೀವಿದ್ಯೆಗಳ ಅದ್ಯಯನ. | |
| ಪೃಥ್ವಿಗುರುಕುಲ | Army | ಆಧುನಿಕ ಶಸ್ತ್ರಾಸ್ತ್ರಗಳ ಅಧ್ಯಯನಕ್ಕಾಗಿ ಅಗ್ನಿಪಥ ಮಾರ್ಗದಲ್ಲಿ ೧೮-೨೨ನೇ ಜನ್ಮೋತ್ಸವದ ಮಧ್ಯದ ನಾಲ್ಕು ಸಂವತ್ಸರಗಳ ಕಾಲ ಈ ಗುರುಕುಲಗಳೆ ತ್ರೀವಿದ್ಯಾ ಅಧ್ಯಯನ ಕೇಂದ್ರಗಳು. |
| ವಾಯುಗುರುಕುಲ | Airforce | |
| ಅರ್ಘ್ಯಗುರುಕುಲ | Navy | |
| ಆಕಾಶಗುರುಕುಲ | ೨೨-೨೬ನೇ ಜನ್ಮೋತ್ಸವಗಳ ನಾಲ್ಕು ಸಂವತ್ಸರಗಳಲ್ಲಿ ಅತ್ಯಂತ ಕಠಿಣ ತ್ರೀವಿದ್ಯೆಗಳ ಅದ್ಯಯನ ಕೇಂದ್ರ. | |

ಅಗ್ನಿಗುರುಕುಲ, ವಾಯುಗುರುಕುಲ, ಪೃಥ್ವಿಗುರುಕುಲ, ಅರ್ಘ್ಯಗುರುಕುಲ ಮತ್ತು ಆಕಾಶಗುರುಕುಲಗಳಲ್ಲಿ ಋತು ಅಧ್ಯಾಯ ವ್ರತದೊಂದಿಗೆ ತ್ರಿವಿದ್ಯಾವ್ರತಗಳಿಂದ ಸನ್ಮಾರ್ಗಸಿದ್ಧಿಪಡೆಯುವ ವಿದ್ಯಾ ಕ್ಷೇತ್ರವೇ ಪಂಚಮೈತ್ರಿಗುರುಕುಲ.



ಅಗ್ನಿಗುರುಕುಲವು ೧೮ ನೇ ಸಂತ್ಸರದವರೆಗಿನ ಶಿಕ್ಷಣ ನೀಡುವ ವಿದ್ಯಾ ಕೇಂದ್ರವಾಗಿರುತ್ತದೆ. ಅರ್ಘ್ಯ,ವಾಯು ಮತ್ತು ಪೃಥ್ವಿ ಗುರುಕುಲಗಳು ಅಗ್ನಿವೀರರನ್ನಾಗಿಸುವಂತ ಆಧುನಿಕ ಶಸ್ತ್ರಾಸ್ತ್ರ ತರಬೇತಿಯ ವಿದ್ಯಾ ಕೇಂದ್ರಗಳಾಗಿರುತ್ತವೆ. ಇಲ್ಲಿ ತರಬೇತಿ ಪಡೆದವರು ಮತ್ತು ೨೧ ನೇಯ ಜನ್ಮಸಂವತ್ಸರ ದಾಟಿದವರಿಗೆ ಆಕಾಶಗುರುಕುಲದಲ್ಲಿ ತ್ರೀವಿದ್ಯಾವ್ರತವು ಅತ್ಯಂತ ಕಠೀಣಾತಿ ಕಠೀಣ ತಪಸ್ಸಾಗಿರುತ್ತದೆ. ಆಕಾಶಗುರುಕುಲದಲ್ಲಿ ಜ್ಞಾನಶಾಸ್ತ್ರದ ಉದ್ಯೋಗ ಮಾರ್ಗದರ್ಶಣ ಮತ್ತು ಆತ್ಮವಿದ್ಯೆಗೆ ಹೆಚ್ಚು ಮಹತ್ವನೀಡಲಾಗುತ್ತದೆ.






1 2 3 4 5 6 7 8 9 10 11 12 13 14 15 16 17 18 19 20 21 22 23 24 25 26

● ಪಂಚಮೈತ್ರಿ ಗುರುಕುಲ ಪ್ರವೇಶ

## ಅಗ್ನಿಗುರುಕುಲ

- ಸಂಸ್ಕಾರವಿದ್ಯಾ ಪಾರಂಗತ ನಾಗಿರಬೇಕು.
- ತ್ರೀವಿದ್ಯಾವ್ರತ ಸಂಪೂರ್ಣಗೊಳಿಸ ಬೇಕು.
- ಋತುಅಧ್ಯಯನ ವ್ರತಕ್ಕೆ ಭದ್ದನಾಗಿರ ಬೇಕು.
- ವಿಜಯೀತ್ರಯೋಮಾರ್ಗವ್ರತಧಾರಿಯಾಗಿರ ಬೇಕು.
- ಸಂಸ್ಕೃತಿ, ಪ್ರಕೃತಿಯ ರಕ್ಷಕನಾಗಿರ ಬೇಕು.

## ಪೃಥ್ವಿಗುರುಕುಲ, ಅರ್ಘ್ಯಗುರುಕುಲ, ವಾಯುಗುರುಕುಲ

- ಅಗ್ನಿಪಥವ್ರತಧಾರಿ ಯಾಗಿರಬೇಕು.
- ವೇಗ್ವಿದ್ಯಾ, ಮಣಿತ್ವಿದ್ಯಾ, ಧಾರ್ಢ್ಯತ್ವಿದ್ಯಾ, ಮರ್ಕಟ್ವಿದ್ಯಾ ಪಾರಂಗತನಾಗಿರ ಬೇಕು.
- ಶಾಸ್ತ್ರವಿದ್ಯಾ ಪಾರಂಗತನಾಗಿರ ಬೇಕು.
- SSLC&PUC SCIENCE ವಿಭಾಗದಲ್ಲಿ ಉತ್ತೀರ್ಣರಾಗಿರ ಬೇಕು.
- ಯೋಗ್ಯತಾ ಪರೀಕ್ಷೆಯ ಉತ್ತೀರ್ಣತೆಯೋಂದಿಗೆ ಭಾರತೀಯ ವಾಯು,ಭೂ,ಜಲಸೇನಾ ವಿಭಾಗಗಳಲ್ಲಿ ಇಛ್ಛಾನುಸಾರ ಅಗ್ನಿವೀರನಾಗಿ ಆಧುನಿಕ ಶಸ್ತ್ರಾಸ್ತ್ರಗಳ ಅಧ್ಯಯನ ಮಾಡಬಹುದು.

## ಆಕಾಶ ಗುರುಕುಲ

- ೨೧ನೇ ಜನ್ಮೋತ್ಸವದ ನಂತರದ ಹಂತ.
- ಅಗ್ನಿವೀರನಾಗಿರ ಬೇಕು.
- ಸಂಸ್ಕಾರವಿದ್ಯಾ ಪಾರಂಗತನಾಗಿರ ಬೇಕು.
- ಅಗ್ನಿಪಥವ್ರಥ ಸಂಪೂರ್ಣಗೊಳಿಸಿರ ಬೇಕು.
- ವಿಜಯೀವ್ರತ ಮತ್ತು ಜ್ಞಾನಶಾಸ್ತ್ರ ಸ್ವಯಂಅಧ್ಯಯನ ತೀವ್ರತೆಯಲ್ಲಿ ಅಭ್ಯಸಿಸ ಬೇಕು.

UPSC, KPSC, SSC, NDA, NEET, JEE, CET ಪರೀಕ್ಷೆಗಳ ಪೈಕಿ ಒಂದರಲ್ಲಿ ಇಛ್ಛಾನುಸಾರ ಉತ್ತೀರ್ಣತೆ, ಆತ್ಮವಿದ್ಯಾ ಪಾರಂಗತನಾಗುವುದೊಂದೆ ಆಕಾಶಗುರುಕುಲದ ಗುರಿ.
ಗುರಿಯ ಸಂಪನ್ನತೆಯೋಂದಿಗೆ ಗೃಹಸ್ಥಾಶ್ರಮ ಪ್ರಾರಂಭವಾಗುವುದು.






| ಕಾಲ | ಋತು | ಮಾಸ | ಶಾಸ್ತ್ರವಿದ್ಯೆ | ಗಂಧರ್ವವಿದ್ಯೆ | ಶಸ್ತ್ರವಿದ್ಯೆ |
|---|---|---|---|---|---|
| ಬೇಸಿಗೆ | ವಸಂತಋತು | ಚೈತ್ರ<br>ವೈಶಾಖ | **ಧರ್ಮಶಾಸ್ತ್ರ**<br>☐ ಬ್ರಹ್ಮಜ್ಞಾನ<br>☐ ೧೮ ಪುರಾಣ<br>☐ ವೇದಗಳು<br>☐ ಜ್ಯೋತಿಷ್ಯ ಶಾಸ್ತ್ರ<br>☐ ಸಮಾಜ ಮತ್ತು ಸಂಘಟನೆ | **ಸಂಗೀತಶಾಸ್ತ್ರ**<br>☐ ಕರ್ನಾಟಿಕ್ ಸಂಗೀತ<br>☐ ಗೀತರಚನೆ<br>☐ ವಾದ್ಯವಿದ್ಯಾ<br>☐ ಸಂಯೋಜನೆ<br>☐ ಸಂಕಲನ | **ವೇಗ್ವಿದ್ಯಾ**<br>☐ ವೇಗ್ವ್ಯಾಯಾಮ<br>☐ ಓಟ<br>☐ ಈಜು<br>☐ ಕುದುರೆ ಸವಾರಿ<br>☐ ಮರದಾಸನ |
| | ಗ್ರೀಷ್ಮಋತು | ಜೇಷ್ಠ<br>ಆಶಾಡ | **ಭಾಷಾಶಾಸ್ತ್ರ**<br>☐ ಅಕ್ಷರಜ್ಞಾನ<br>☐ ಅಕ್ಷರ ಲೇಖನ<br>☐ ಶಬ್ದಭಂಢಾರ<br>☐ ವ್ಯಾಕರಣ<br>☐ ಸಂಭಾಷಣೆ ಮತ್ತು ಸಾಹಿತ್ಯ | **ನೃತ್ಯಶಾಸ್ತ್ರ**<br>☐ ವ್ಯಾಯಾಮ<br>☐ ಭರತನಾಟ್ಯ<br>☐ ನವರಸ ನೃತ್ಯ<br>☐ ಸಾಹಿತ್ಯ ನೃತ್ಯ<br>☐ ನೃತ್ಯಸಂಯೋಜನೆ | **ಮಣಿತ್ವಿದ್ಯಾ**<br>☐ ಸೂರ್ಯ ನಮಸ್ಕಾರ<br>☐ ಚಂದ್ರ ನಮಸ್ಕಾರ<br>☐ ಗುರು ನಮಸ್ಕಾರ<br>☐ ಭುವಿ ನಮಸ್ಕಾರ<br>☐ ಶಕ್ತಿನಮಸ್ಕಾರ |
| ಮಳೆಗಾಲ | ವರ್ಷಋತು | ಶ್ರಾವಣ<br>ಭಾದ್ರಪದ | **ಗಣಿತಶಾಸ್ತ್ರ**<br>☐ ಅಂಕಗಣಿತ<br>☐ ಬೀಜಗಣಿತ<br>☐ ರೇಖಾಗಣಿತ<br>☐ ಅನ್ವಯಿಕಗಣಿತ<br>☐ ಮಾನಸಿಕ ಸಾಮರ್ಥ್ಯ | **ನಟನಾಶಾಸ್ತ್ರ**<br>☐ ನವರಸ<br>☐ ಧ್ವನಿಯಂತ್ರಣ<br>☐ ಏಕಪಾತ್ರ<br>☐ ನಾಟಕ<br>☐ ಚಲನಚಿತ್ರ ನಟನೆ | **ಧಾರ್ಢ್ಯತ್ವಿದ್ಯಾ**<br>☐ ಧಾರ್ಢ್ಯತ್ವ್ಯಾಯಾಮ<br>☐ ದಂಡಬೈಟಕ್<br>☐ ಹನುಮಗ್ದರ್<br>☐ ಪರಶುಮಗ್ದರ್<br>☐ ರಾಂಮಗ್ದರ್ |
| | ಶರದೃತು | ಅಶ್ವಿಜ<br>ಕಾರ್ತೀಕ | **ವಿಜ್ಞಾನಶಾಸ್ತ್ರ**<br>☐ ಭೌತಶಾಸ್ತ್ರ<br>☐ ರಸಾಯನಶಾಸ್ತ್ರ<br>☐ ಜೀವಶಾಸ್ತ್ರ<br>☐ ವೈದ್ಯಶಾಸ್ತ್ರ<br>☐ ತಂತ್ರಜ್ಞಾನ | **ಚಿತ್ರಶಿಲ್ಪಶಾಸ್ತ್ರ**<br>☐ ರೇಖಾಚಿತ್ರಣ<br>☐ ಸ್ಮರಣಚಿತ್ರಣ<br>☐ ವರ್ಣಚಿತ್ರಣ<br>☐ ಮಾದರಿತಯಾರಿಕೆ<br>☐ ಶಿಲ್ಪಶಾಸ್ತ್ರ | **ಮರ್ಕಟ್ವಿದ್ಯಾ**<br>☐ ಮರ್ಕಟವ್ಯಾಯಾಮ<br>☐ ಮರ್ಕಟಾಸನ<br>☐ ಹನುಮರ್ಕಟ<br>☐ ಪರಶುಮರ್ಕಟ<br>☐ ರಾಂಮರ್ಕಟ |
| ಚಳಿಗಾಲ | ಹೇಮಂತಋತು | ಮಾರ್ಗಶಿರ<br>ಪುಶ್ಯ | **ಜ್ಞಾನಶಾಸ್ತ್ರ**<br>☐ ಇತಿಹಾಸ<br>☐ ಭುಗೋಳ<br>☐ ರಾಜ್ಯಶಾಸ್ತ್ರ<br>☐ ಅರ್ಥಶಾಸ್ತ್ರ<br>☐ ಸಂವಿಧಾನ<br>☐ ಸಾಮಾನ್ಯಜ್ಞಾನ<br>☐ ಪ್ರಚಲಿತವಿದ್ಯಮಾನ<br>☐ ಉದ್ಯೋಗ ಮಾರ್ಗದರ್ಶನ | **ಚಲನಚಿತ್ರ**<br>☐ ಕಥೆ<br>☐ ಚಿತ್ರಕಥೆ<br>☐ ನಿರ್ದೇಶನ<br>☐ ಸಂಕಲನ<br>☐ ವಿತರಣೆ | **ಆಯುಧಾತ್ಮರಕ್ಷಣೆ**<br>☐ ಮಲ್ಲಗಂಭ<br>☐ ಮಲ್ಲಯುದ್ಧ<br>☐ ಮುಷ್ಠಿಯುದ್ಧ<br>☐ ಗಧಾಯುದ್ಧ<br>☐ ದೃಷ್ಟಿಯುದ್ಧ |
| | ಶಿಶಿರ ಋತು | ಮಾಘ<br>ಪಾಲ್ಗುಣ | | | |

ಅಗ್ನಿಪಥವ್ರತದ ಅಧ್ಯನಕ್ಕಾಗಿ ಋತು ಅಧ್ಯಾಯ ವ್ರತ.

ಸ್ವಯಂ ಸೇವಕ ವ್ರಥದಾರಿಯು ಸಂಸ್ಕಾರ ವಿದ್ಯಾಪಾರಂಗತನಾದ ಮೇಲೆ ಜನಿವಾರ, ತುಳಸಿಮಾಲೆ ಧರಿಸಿದ ನಂತರ ಅಗ್ನಿಪಥವ್ರತವು ಪ್ರಾರಂಭವಾಗುತ್ತದೆ. ಅಗ್ನಿವೀರ ಆಗುವುದರೊಂದಿಗೆ ಶಕ್ತಿಕಲೆ, ಆಕಾಶಗುರುಕುಲದ ಪರೀಕ್ಷಾ ಉತ್ತೀರ್ಣನಾದರೆ ಶಾಸ್ತ್ರವಿದ್ಯೆ ಮತ್ತು ಕೊನೆಯದಾಗಿ ಉತ್ತಮ ಸಿನೆಮಾಗಳ ಮೂಲಕ ಗುರುಕುದ ಪ್ರಚಾರ ಮಾಡಿದಾಗ ಗಂಧರ್ವವಿದ್ಯೆಯ ಸುಫಲ ದೊರಕಿದಂತಾಗುವುದು.

ವಿಜಯೀವ್ರತದ ಆತ್ಮವಿದ್ಯೆಯ ಸಂಪೂರ್ಣತೆಯೋಂದಿಗೆ ಬ್ರಹ್ಮಚರ್ಯ ಆಶ್ರಮದ ಸಾರ್ಥಕ ಜೀವನ ನಡೇಸಿದಂತಾಗುತ್ತದೆ. ಈ ಸಂಪೂರ್ಣ ಸನ್ಮಾರ್ಗ ಸುವಿದ್ಯೆಯ ಅಧ್ಯಯನ ಕೇಂದ್ರಗಳೆ ಪಂಚಮೈತ್ರಿ ಗುರುಕುಲಗಳು.

ಅಧ್ಯಾಯ

3

ಅಗ್ನಿಪಥವ್ರತ

# ಶಾಸ್ತ್ರವಿದ್ಯೆ




ಸ್ವಯಂ ಸೇವಕ ವ್ರತದ ಮೂಲಕ ಸಂಸ್ಕಾರವಿದ್ಯಾ ಪಾರಂಗತ ವ್ರತಧಾರಿ ಇಗ ನೀನು ಮುಖ್ಯ ಜೀವನಾಧಾರ ಸುವಿದ್ಯೆಗಳರಿಯುವ ಸನ್ಮಾರ್ಗವ್ರತ ಅಗ್ನಿಪಥವ್ರತವನ್ನು ಆರಂಭಿಸಿರುವೇ, ಧನ್ಯವಾದ.

## ಅಗ್ನಿಪಥವ್ರತ ವಿದ್ಯೆಗಳು

| ವಿದ್ಯಾ | ವಿಷಯ | ಸಂಪನ್ನತೆ |
|---|---|---|
| ಶಾಸ್ತ್ರವಿದ್ಯೆ | 01) ಧರ್ಮಶಾಸ್ತ್ರ | ☐ |
| | 02) ಭಾಷಾಶಾಸ್ತ್ರ | ☐ |
| | 03) ಗಣಿತಶಾಸ್ತ್ರ | ☐ |
| | 04) ವಿಜ್ಞಾನಶಾಸ್ತ್ರ | ☐ |
| | 05) ಜ್ಞಾನಶಾಸ್ತ್ರ | ☐ |
| ಗಂಧರ್ವವಿದ್ಯೆ | 01) ಸಂಗೀತಶಾಸ್ತ್ರ | ☐ |
| | 02) ನೃತ್ಯಶಾಸ್ತ್ರ | ☐ |
| | 03) ನಟನಾಶಾಸ್ತ್ರ | ☐ |
| | 04) ಚಿತ್ರಶಿಲ್ಪಶಾಸ್ತ್ರ | ☐ |
| | 05) ಚಲನಚಿತ್ರ | ☐ |
| ಶಸ್ತ್ರವಿದ್ಯೆ | 01) ವೇಗ್ವಿದ್ಯಾ | ☐ |
| | 02) ಮಣಿತ್ವಿದ್ಯಾ | ☐ |
| | 03) ಧಾರ್ಢ್ಯತ್ವಿದ್ಯಾ | ☐ |
| | 04) ಮರ್ಕಟ್ವಿದ್ಯಾ | ☐ |
| | 05) ಆಯುಧಾತ್ಮರಕ್ಷಣೆ | ☐ |

ಅಧ್ಯಾಯ ೦೧

## ಧರ್ಮಶಾಸ್ತ್ರ

### 1.1 ] ಬ್ರಹ್ಮಜ್ಞಾನ

ಬ್ರಹ್ಮಜ್ಞಾನ ಎನ್ನುವುದರ ಕುರಿತು ಈ ಹಿಂದೆ ಬ್ರಹ್ಮಚರ್ಯದ ಕುರಿತು ಅಧ್ಯಯನ ಮಾಡುವಾಗ ಬ್ರಹ್ಮಪದಾರ್ಥ ಮತ್ತು ಬ್ರಹ್ಮ ಹಾಗೆ ಕಾಯದ ಕುರಿತು ಅಧ್ಯಯನ ಮಾಡಿದ್ದೆವೆ. ಈಗ ನಾವು ಸೃಷ್ಠಿಯ ಆರಂಭ ಮತ್ತು ಅಂತ್ಯದ ಕುರಿತು ಅರಿಯೋಣ ಇದಕ್ಕೆ ಬ್ರಹ್ಮಜ್ಞಾನ ಎನ್ನುವರು. ಈ ಜ್ಞಾನ ದುಷ್ಟ ಸಾಧಕರ ಕೈ ಸೇರಿದರೆ ಪ್ರಕೃತಿಯಲ್ಲಿ ಅಲ್ಲೋಲ ಕಲ್ಲೋಲವನ್ನೆ ಮಾಡಿ ವಿನಾಶಕ್ಕೆ ಕಾರಣವಾಗುವರು. ಸಂಸ್ಕಾರ ಹೀನ ವ್ಯಕ್ತಿ ಬ್ರಹ್ಮಜ್ಞಾನ ಅಧ್ಯಯನಕ್ಕೆ ಅಮಾನ್ಯನಾಗಿರುತ್ತಾನೆ.

ಈ ಸೃಷ್ಠಿ ಪರಬ್ರಹ್ಮ ಸ್ವರೂಪಿ ಬ್ರಹ್ಮಪದಾರ್ಥದ ಹೂರಪದಾರ್ಥ, ಬ್ರಹ್ಮವೆನಿಸಿದ ಪಂಚಭೂತಗಳಿಂದ ಸೃಷ್ಠಿಯಾದ ಕಾಯವು ಪರಬ್ರಹ್ಮದ ಪ್ರವೇಶದಿಂದಲೇ ಜನ್ಮತಾಳುತ್ತದೆ.




ಪ್ರತಿ ಅಣುವಿನಿಂದ ಹಿಡಿದು ಬ್ರಹ್ಮಾಡವೆಲ್ಲವು ಈ ಮೇಲಿನ ಚಿತ್ರದಂತೆಯೆ ವೈಕುಂಠ, ಬ್ರಹ್ಮಲೋಕ ಮತ್ತು ಕೈಲಾಸಗಳನ್ನು ಒಳಗೊಂಡೆ ನಿರ್ಮಾನವಾಗಿವೆ. ಅಣುವಿನ ನ್ಯೊಟ್ರಾನ್ ವೈಕುಂಠವನ್ನು ಪ್ರತಿನಿಧಿಸುತ್ತದೆ. ಪ್ರೋಟಾನ ಬ್ರಹ್ಮಲೋಕವನ್ನು ಪ್ರತಿನಿಧಿಸುತ್ತದೆ. ಇಲೆಕ್ಟ್ರಾನ್ ಕೈಲಾಸವನ್ನು ಪ್ರತಿನಿಧಿಸುತ್ತದೆ.

# ೨.೪। ಖೇಚರಿಮುದ್ರಾಧಾರಣ ಧ್ಯಾನ

ಕೀಪುಮಾ ಆಸನದಲ್ಲಿ ಕುಳಿತು ಈ ಮೂದಲು ಅಭ್ಯಸಿಸಿ ಸಿದ್ದಿಸಿಕೊಂಡ ಸರ್ವವನ್ನು ಸಮರ್ಥವಾಗಿ ನಿರ್ವಹಿಸಿದ್ದಕ್ಕೆ ಅಮೃತದ ಬಹುಮಾನವನ್ನು ಪಡೆಯುವ ಕ್ರಮವೇ ಈ ಖೇಚರಿ ಮುದ್ರಾಧಾರಣ ಧ್ಯಾನ. ಈ ಕೆಳಗೆ ಚಿತ್ರದಲ್ಲಿ ತೂರಿಸಿರುವಂತೆ ನಾಲಿಗೆಯನ್ನು ಅಮೃತಗ್ರಂಥಿಯತ್ತ ಒಯ್ದು ಕೈವಲ್ಯ ಸ್ಥಿತಿ ತಲುಪಿ ನಿಮ್ಮಿಚ್ಚೆಯಷ್ಟು ಸಮಯ ಈ ಧ್ಯಾನಾವಸ್ಥೆಯಲ್ಲಿ ಅಮೃತ ಸವಿಯಬಹುದು.

ಆಧ್ಯಾತ್ಮ ಜಗತ್ತಿನ ಅತ್ಯಂತ ಶ್ರೇಷ್ಠ ಭೌತಿಕ ಶರೀರದ ಉಡುಗೊರೆ ಇದಾಗಿದೆ.








# ೨.೫ ಸಮಾಧಿ ಧ್ಯಾನ

## ೧ ಸವಿಕಲ್ಪಸಮಾಧಿ

* ಸಮಾಧಿ ಯೋಗಾರಂಭ ಸ್ಥಿತಿ
* ಭೌತಿಕತೆಯಿಂದ ದೂರವಾಗುವ ಆದಿ ಹಂತ
* ಕೈವಲ್ಯಸ್ಥಿತಿಯ ಕೈವಶ

## ೨ ನಿರ್ವಿಕಲ್ಪಸಮಾಧಿ

* ನಿರ್ ವಿಕಲ್ಪ - ಸಂಕಲ್ಪ, ಇಛೆಗಳೆಲ್ಲವು ದಮನ ಹೊಂದಿರುವ ಹಂತ.
* ಘಾಢವಾಗಿ ಕೈವಲ್ಯ ಸ್ಥಿತಿ ಸಿದ್ಧಿ
*ಸಂಪೂರ್ಣ ಭೌತಿಕ ವ್ಯವಹಾರ ಪ್ರಜ್ಞಾಹೀನ ನಿರಾಸಕ್ತ ಸ್ಥಿತಿ ಆರಂಭ

## ೩ ಧರ್ಮಮೇಘಾಸಮಾಧಿ

*ಧರ್ಮ ಮೇಘ - ಧರ್ಮದ ಚತುರ್ ಪಾದಗಳೇ ಸತ್ಯಾಂಶ ವೆಂಬ ಪಾಲನಾ ಜ್ಞಾನಪ್ರಾಪ್ತಿ.
* ಸರ್ವಶಕ್ತ ಮನಸ್ಥಿತಿ ಸಿದ್ಧಿ
*ದೈವವಾನಿಯ ಸಿದ್ಧಿ

## ೪ ಸಹಜಸಮಾಧಿ

*ಸಮಾಧಿ ಸ್ಥಿತಿಯ ಆರಂಭ
*ಅಧ್ಬುತ ಸಿದ್ಧಿಗಳ ಪಡೆವದ್ವಾರ ತೆರೆಯುವುದೇ ಈ ಹಂತದದಲ್ಲಿ.

## ೫ ಸೌರಭಸಮಾಧಿ

* ಚಿರಂಜೀವಿ
* ದೈವತ್ವ ಸಿದ್ದಿ







# ಅಧ್ಯಾಯ ೦೩

# ತ್ರಾಟಕ



## ತ್ರಾಟಕ ಅಧ್ಯಾಯಗಳು



ಧ್ಯಾನಾಧ್ಯಯನದಲ್ಲಿ ಸಮಾಧಿ ಸ್ಥಿಥಿಯನುಭವಿಯಾಗಿ ವಿಶ್ವಶಕ್ತಿಯನ್ನು ಆತ್ಮಕ್ಕೆ ಆಹಾರವಾಗಿ ಪಡೆದು ಬಂದಿರುವ ಸಾಧಕ ಗುರುಕುಲ ಪ್ರೀಯನೆ ಇಗ ನೀನು ಜ್ಯೋತಿ ಹೊರಸೂಸುವ ಶಕ್ತಿಯನ್ನು ಕಣ್ಣುಗಳಿಂದ ಸ್ವೀಕರಿಸಿ ಆತ್ಮಾಹಾರವನ್ನಾಗಿ ಪಡೆಯವ ಕ್ರೀಯೇ ತ್ರಾಟಕದ ಅಧ್ಯಯನ ಮಾಡುವೆ.

## ೩.೧) ಬಿಂದುತ್ರಾಟಕ









ಎಕಚಿತ್ತದಿಂದ ಮಧ್ಯ ಬಿಂದುವನ್ನೆ ಗಮನಿಸುತ್ತ ಮಾಡುವ ಧ್ಯಾನಕ್ರಿಯೆಗೆ ತ್ರಾಟಕ ಎನ್ನುತ್ತಾರೆ.

## ೩.೨) ಜ್ಯೋತಿತ್ರಾಟಕ



ಬಿಂದುತ್ರಾಟಕ ದಂತೆಯೆ ಅಧ್ಯಯನ.

ಜ್ಯೋತಿಯ ತುತ್ತತುದಿಯನ್ನು ಏಕಚಿತ್ತದಿಂದ ನೋಡುವುದೆ ಜ್ಯೋತಿತ್ರಾಟಕ

## ೩.೩) ಚಂದ್ರತ್ರಾಟಕ

- ಹುಣ್ಣಿಮೆಯ ಕೆಲದಿನಗಳ ಕಾಲ ಶ್ವೇತರಶ್ಮಿ ಸೂಸುವ ಚಂದ್ರನನ್ನು ನೋಡುತ್ತ ಮಾಡುವ ಧ್ಯಾನವೇ ತ್ರಾಟಕ ಧ್ಯಾನ





## ೩.೪) ಸೂರ್ಯತ್ರಾಟಕ

- ಬೆಳಿಗ್ಗೆ ಮತ್ತು ಸಾಯಂಕಾಲ ಕೇಸರಿ ರಶ್ಮಿಸೂಸುವ ಸೂರ್ಯನನ್ನು ನೋಡುತ್ತ ಮಾಡುವ ಧ್ಯಾನವೇ ತ್ರಾಟಕ ಧ್ಯಾನ





# ೩.೫] ಗುರುತ್ರಾಟಕ & ಸಮ್ಮೋಹಿನಿ





ಬಿಂದುತ್ರಾಟಕ ದಂತೆಯೆ ಅಧ್ಯಯನ.
ಗುರುವಿನ ಭಾವಚಿತ್ರ, ಕನ್ನಡಿಯಲ್ಲಿ
ಸ್ವಭಾವ ಚಿತ್ರವನ್ನು ಏಕಚಿತ್ತದಿಂದ
ನೋಡುವುದೆ ಗುರುತ್ರಾಟಕ.

* ಸಮ್ಮೋಹಿನಿ

೧ ಭಾವಸೃಷ್ಟಿ ಸಮ್ಮೋಹಿನಿ
೨ ಸ್ಪಟಿಕ ಸಮ್ಮೋಹಿನಿ
೩ ಹಸ್ತಚಾಲನ ಸಮ್ಮೋಹಿನಿ
೪ ಮಂತ್ರದಂಡ ಸಮ್ಮೋಹಿನಿ
೫ ದೃಷ್ಟಿ ಸಮ್ಮೋಹಿನಿ





# ಅಧ್ಯಾಯ ೦೪

# ಅಷ್ಟಸಿದ್ಧಿ ಮತ್ತು ನವನಿಧಿ



## ಅಷ್ಟಸಿದ್ಧಿ ಮತ್ತು ನವನಿಧಿ

| | |
|---|---|
| ಅನಿಮಾ | ಪ್ದಮನಿಧಿ |
| ಮಹಿಮಾ | ಮಹಾಪ್ದಮನಿಧಿ |
| ಪ್ರಾಕಮ್ಯ | ನೀಲನಿಧಿ |
| ಗರಿಮಾ | ಮುಕುಂದನಿಧಿ |
| ಲಘಿಮಾ | ನಂದನಿಧಿ |
| ಈಶತ್ವ | ಮಕರನಿಧಿ |
| ವಶಿತ್ವ | ಕಶ್ಯಪನಿಧಿ |
| ಪ್ರಾಪ್ತಿ | ಶಂಖನಿಧಿ |
| | ಕರ್ವನಿಧಿ |

ಯಾವಾಗ ವ್ರತಧಾರಿ ಸಮಾಧಿ ಸ್ಥಿತಿಯ ನಂತರ ತ್ರಾಟಕ ಸಿದ್ಧಿಪಡೆಯುವನೋ ಅವಾಗ ಅವನಲ್ಲಿ ೮ ಚಕ್ರ ಜಾಗೃತವಾಗಿರುತ್ತವೆ. ಮುಂದೆ ಕುಂಡಲಿನಿಯು ೮ ಚಕ್ರ ಜಾಗೃತಿಯ ನಂತರ ಮುಂದುವರೆದಂತೆ ಆ ವ್ರತಧಾರಿಗೆ ಅಷ್ಟಸಿದ್ಧಿ ನಂತರ ನವನಿಧಿ ಸಿದ್ಧಿಗಳು ದೊರೆಯುತ್ತವೆ. ೨೧ನೇ ಚಕ್ರ ಸಿದ್ಧಿಯೊಂದಿಗೆ ಅಷ್ಟಸಿದ್ಧಿ ಹಸ್ತಗತವಾಗುತ್ತವೆ. ೪೨ ಚಕ್ರಜಾಗೃತಿಗೆ ನವನಿಧಿ ಲಭಿಸುತ್ತವೆ.



**೮ ನೇ ಚಕ್ರದಿಂದ ೪೨ ನೇ ಚಕ್ರದೊರೆಗಿನ ಪಯನದ ಪಲಿತಾಂಶಕ್ಕೆ ಉಡುಗೊರೆ ಈ ಅಷ್ಟಸಿದ್ಧಿ ನವನಿಧಿ.**

# ಅಷ್ಟಸಿದ್ಧಿ

**ಅಣಿಮ (Anima):** ಒಂದು ಅಣು ಕಣದಷ್ಟು ಚಿಕ್ಕದಾಗಿ ಪರಿವರ್ತನೆ ಆಗಬಲ್ಲ ಶಕ್ತಿ.

**ಮಹಿಮ (Mahima):** ವಿಶ್ವದ ಪ್ರಮಾಣದಷ್ಟು ದೊಡ್ಡದಾಗಿ ಪರಿವರ್ತನೆ ಆಗಬಲ್ಲ ಶಕ್ತಿ.

**ಗರಿಮ (Garima):** ಅತ್ಯಂತ ಭಾರೀಯಾಗಬಲ್ಲ ಶಕ್ತಿ.

**ಲಘಿಮ (Laghima):** ಅತ್ಯಂತ ಹಾಗು ಸೂಕ್ಷ್ಮವಾಗಿ ಹಾಗು ಹೊಳೆವಾಗಬಲ್ಲ ಶಕ್ತಿ.

**ಪ್ರಾಪ್ತಿ (Prapti):** ಯಾವ ದೂರದಿಂದಲೂ ಯಾವ ವಸ್ತುವನ್ನು ಪಡೆಯಬಲ್ಲ ಶಕ್ತಿ.

**ಪ್ರಾಕಾಮ್ಯ (Prakamya):** ಯಾವ ಇಚ್ಛೆಯನ್ನು ಹೊಂದಿದರೂ ಅದನ್ನು ಪೂರೈಸಬಲ್ಲ ಶಕ್ತಿ.

**ಈಶಿತ್ವ (Isitva):** ಸರ್ವ ಪ್ರಕೃತಿ ಶಕ್ತಿಗಳನ್ನು ನಿಯಂತ್ರಿಸಬಲ್ಲ ಶಕ್ತಿ.

**ವಾಶಿತ್ವ (Vasitva):** ಸರ್ವ ಜೀವಿಗಳನ್ನೂ ನಿಯಂತ್ರಿಸಬಲ್ಲ ಶಕ್ತಿ.

ಪ್ರಾಣಾಯಾಮ, ಧ್ಯಾನ ಮತ್ತು ತ್ರಾಟಕದ ಅಧ್ಯಯನದ ನಂತರ ಶಾಸ್ವತ ಕುಂಡಲಿನಿ ಚಕ್ರಜಾಗೃತವಾದ ಪರಿಣಾಮ ೭ ಚಕ್ರಜಾಗೃತಿಗೆ ತ್ರಿನೇತ್ರ ಮತ್ತು ೭x೫=೩೫ ಚಕ್ರಶಾಸ್ವತ ಜಾಗೃತಿಗೆ ಪಂಚತತ್ವ ನಿಯಂತ್ರಣ ೮x೮+೨= ೬೬ ಚಕ್ರಜಾಗೃತಿಗೆ ಅಷ್ಟಸಿದ್ಧಿ ಮತ್ತು ಹೀಗೆ ಚಕ್ರಗಳು ಹೆಚ್ಚಾಗಿ ಶಾಸ್ವತ ಸಿದ್ದಿಯಾಗುತ್ತ ಸಾಗಿದಂತೆ ನವನಿಧಿ ನಿರ್ಮಾನ ಶಕ್ತಿ ಲಭಿಸುತ್ತದೆ.

# ನವನಿಧಿ

**ಮಹಾಪದ್ಮ (Mahapadma):** ದೊಡ್ಡ ಕಮಲ, ಕುಬೇರನ ಮಹಿಮೆಯನ್ನು ಪ್ರತಿನಿಧಿಸುತ್ತದೆ.

**ಪದ್ಮ (Padma):** ಕಮಲ, ಸೌಂದರ್ಯ, ಶುದ್ಧತೆ ಮತ್ತು ಆಧ್ಯಾತ್ಮಿಕ ಬೆಳಕನ್ನು ಪ್ರತಿನಿಧಿಸುತ್ತದೆ.

**ಶಂಖ (Shankha):** ಶಂಖ, ಬ್ರಹ್ಮಾಂಡ ಧ್ವನಿ ಮತ್ತು ಶುಭವನ್ನು ಪ್ರತಿನಿಧಿಸುತ್ತದೆ.

**ಮಕರ (Makara):** ಪೌತಂಗದ ರೂಪ, ನೀರು ಮತ್ತು ಜಲಜೀವನವನ್ನು ಪ್ರತಿನಿಧಿಸುತ್ತದೆ.

**ಕಚ್ಛಪ (Kachchapa):** ಆಯುರಕ್ಕೆ ಮತ್ತು ತಾಳ್ಮೆಗೆ ಪ್ರತಿನಿಧಿಸುತ್ತದೆ.

**ಮುಕುಂದ (Mukunda):** ದಿವ್ಯ ರತ್ನ, ದಿವ್ಯ ಆಶೀರ್ವಾದಗಳನ್ನು ಪ್ರತಿನಿಧಿಸುತ್ತದೆ.

**ಕುಂಡ (Kunda):** ಮಹತ್ವದ ರತ್ನ, ಶಕ್ತಿ ಮತ್ತು ಶಕ್ತಿಶಾಲಿತ್ವವನ್ನು ಪ್ರತಿನಿಧಿಸುತ್ತದೆ.

**ನೀಲಮ (Neelam):** ನೀಲಿ ವರ್ಣದ ನೀಲಮಣಿ, ರಕ್ಷಣೆ ಮತ್ತು ಆಧ್ಯಾತ್ಮಿಕತೆಯನ್ನು ಪ್ರತಿನಿಧಿಸುತ್ತದೆ.

**ಖರ್ವ (Kharva):** ಆಕಾಶಗಂಗೆ ಅಥವಾ ಕಲಶ, ಪ್ರಚುರತೆ ಮತ್ತು ಪೋಷಣೆಯನ್ನು ಪ್ರತಿನಿಧಿಸುತ್ತದೆ.

## ೨) ೯ ರಿಂದ ೪೨ ಚಕ್ರಶುದ್ಧ ಜಾಗೃತಿ



ಕುಂಡಲಿನಿಯನ್ನು ಸಹಸ್ರಾರಕ್ಕೆ ತಂದು ಮೊದಲಬಾರಿ ಕೆಲದಿನ ಹಿಡುದಿಟ್ಟು ೭ ಚಕ್ರಗಳ ಪರಮ ಸಿದ್ಧಿಪಡೆದಾಗ ತ್ರಿನೇತ್ರ ಜಾಗೃತಿಯಾಗುತ್ತದೆ, ಮರಳಿ ಕೆಳಗೆ ತರುವುದೇ ೮ನೇ ಚಕ್ರ ಜಾಗೃತಿಯ ಆರಂಭಿಕ ಹಂತ. ಈ ರೀತಿಯಲ್ಲಿ ೫ ಬಾರಿ ಪುನರಾವರ್ತಿಸಿದರೆ ((೭ತ್ರಿನೇತ್ರ+)೭ಭುವಿ+೭ಅಗ್ನಿ+೭ವಾಯು+೭ಜಲ+೭ಆಕಾಶ=೪೨) ಭುಮಿಕಲೇ, ಅಗ್ನಿ, ವಾಯು, ಜಲ, ಆಕಾಶ ಸಿದ್ಧಿಗಳು ಫಲಿತಾಂಶ ಸ್ವರೂಪವಾಗಿ ದೂರೆಯುತ್ತವೆ. ಭುವಿಯಲ್ಲಿಯ ದೈವವೇ ಸಾಧಕನಾಗುವನು.

## ೩) ೪೩ ರಿಂದ ೧೦೮ ಚಕ್ರಶುದ್ಧ ಜಾಗೃತಿ



| Sl.No | ಶುದ್ಧಚಕ್ರ ಜಾಗೃತಿ | ಉತ್ತೀರ್ಣತೆಯ ಫಲಿತಾಂಶ |
|---|---|---|
| 1 | 7= 7 | ಶಾಶ್ವತ ತ್ರೀನೇತ್ರ ಜಾಗೃತಿ |
| 2 | 5x5= 35 | ಶಾಶ್ವತ ಪಂಚಭೂತ ನಿಯಂತ್ರನ ಸಿದ್ಧಿ |
| 3 | 8x8+2= 66 | ಶಾಶ್ವತ ಅಷ್ಟಸಿದ್ಧಿ |
| | Total : 108 | |

7 ಚಕ್ರ ಜಾಗೃತಿಗೆ ತ್ರೀನೇತ್ರವು ಶಾಸ್ವತವಾಗಿ ಜಾಗೃತ ಹೊಂದುವುದು. ನಂತರ ಕುಂಡಲಿನಿ ಕ್ರಿಯೇ ಮುಂದುವರೆದಂತೆ 8 ನೇ ಚಕ್ರದಿಂದ 42ನೇ ಚಕ್ರದವರೆಗೆ ವಟ್ಟು 35 ಚಕ್ರಗಳು ಶಾಸ್ವತವಾಗಿ ಜಾಗೃತವಾದರೆ ತಲಾ ಐದು ಚಕ್ರಜಾಗೃತಿಯ ಫಲಿತಾಂಶವಾಗಿ ಒಂದು ಪಂಚಭೂತ ಸಿದ್ಧಿ ಶಾಶ್ವತವಾಗಿ ದೊರಕುವುದು. ಹೀಗೆ ಮುಂದುವರೆದು 43ನೇ ಚಕ್ರ ಜಾಗೃತಿಯೊಂದಿಗೆ 108 ನೇ ಚಕ್ರಜಾಗೃತಿಯತ್ತ ಬರುವ 66 ಚಕ್ರಗಳು ಜಾಗೃತವಾದಾಗ ಅಷ್ಟಸಿದ್ಧಿಗಳು ಶಾಸ್ವತವಾಗಿ ಲಭಿಸುತ್ತವೇ. 8 ಚಕ್ರಕ್ಕೊಂದರಂತೆ 8 ಸಿದ್ಧಿಗಳು ಸಿದ್ಧಿಸುತ್ತವೆ. ಅಷ್ಟಸಿದ್ಧಿಯ ನಂತರ 2 ಚಕ್ರಜಾಗೃತವಾದಾಗ ಕೈಲಾಸ ಪ್ರಾಪ್ತವಾಗಿ ಶಿವಾಂಶ ಸಂಭೂತನೆ ಸಾಧಕನಾಗುತ್ತಾನೆ. ಹೀಗೆ ಕೈಲಾಸವಾಸಿಯಾಗಲು 0 ದಿಂದ 108 ಚಕ್ರಜಾಗೃತಿಗೊಳ್ಳ ಬೇಕು.

## ೪) ೧೦೮ ರಿಂದ ೧೧೪ ಚಕ್ರಶುದ್ಧ ಜಾಗೃತಿ



| Sl.No | ಶುದ್ಧಚಕ್ರ ಜಾಗೃತಿ | ಉತ್ತೀರ್ಣತೆಯ ಫಲಿತಾಂಶ |
|---|---|---|
| 1 | 7= 7 | ಶಾಶ್ವತ ತ್ರೀನೇತ್ರ ಜಾಗೃತಿ |
| 2 | 5x5= 35 | ಶಾಶ್ವತ ಪಂಚಭೂತ ನಿಯಂತ್ರನ ಸಿದ್ಧಿ |
| 3 | 8x8+2= 66 | ಶಾಶ್ವತ ಅಷ್ಟಸಿದ್ಧಿ |
| 4 | 3(x3=9)+3= 6 | ಶಾಶ್ವತ ನವನಿಧಿ ನಿರ್ಮಾಣ ಶಕ್ತಿ ಸಿದ್ಧಿ |

ತ್ರೀನೇತ್ರ, ಪಂಚಭೂತ ಮತ್ತು ಅಷ್ಟಸಿದ್ಧಿಯನ್ನು ಶಾಶ್ವತವಾಗಿ ಸಿದ್ಧಿಸಿ ಕೊಂಡಾಗ ೧೦೮ ಚಕ್ರಗಳು ಶಾಶ್ವತ ಜಾಗೃತಗೊಂಡು ಸಿದ್ಧಿಸಿವೆ ಎಂದು ಅರ್ಥ. ಹೀಗೆ ಕುಂಡಲಿನಿಯ ಅಧ್ಯಯನ ಮುಂದುವರೆದಾಗ ೧೦೯ ರಿಂದ ೧೧೪ರ ವರೆಗಿನ ಆರು ಚಕ್ರಗಳ ಜಾಗೃತಿಯು ಪ್ರಾರಂಭವಾಗುತ್ತದೆ. ೧೦೯ ನೇ ಚಕ್ರಜಾಗೃತಿಯ ಫಲಿತಾಂಶವಾಗಿ ತಾಮಸ ಗುಣವುಳ್ಳ ಕರ್ವ, ಮಕರ ಮತ್ತು ನಂದ ನಿಧಿಯನ್ನಾಗಿ ಪ್ರಕೃತಿಯಲ್ಲಿ ಪರಿವರ್ತನೇ ಸೃಷ್ಟಿಸ ಬಲ್ಲ ಸಿದ್ಧಿ ದೊರೆಯುವುದು. ೧೧೦ನೇ ಚಕ್ರಜಾಗೃತಿಯ ಫಲಿತಾಂಶವಾಗಿ ರಾಜಸಗುಣವನ್ನು ಹೊಂದಿರುವ ಕಚ್ಛಪ, ಪದ್ಮ ಮತ್ತು ಮಹಾಪದ್ಮ ನಿಧಿಯು ಪ್ರಕೃತಿಯಲ್ಲಿ ಪರಿವರ್ತನೇ ಸೃಷ್ಟಿಸ ಬಲ್ಲ ಸಿದ್ಧಿ ದೊರೆಯುವುದು. ೧೧೧ನೇ ಚಕ್ರ ಜಾಗೃತಿಯ ಫಲಿತಾಂಶ ಸ್ವರೂಪ ಸಾತ್ವಿಕಗುಣವನ್ನು ಹೊಂದಿರುವ ನೀಲ, ಮುಕುಂದ ಮತ್ತು ಶಂಖ ನಿಧಿಯನ್ನಾಗಿ ಪ್ರಕೃತಿಯನ್ನು ಪರಿವರ್ತಿಸ ಬಲ್ಲ ಸಿದ್ಧಿದೊರೆಯುವುದು. ೧೧೨,೧೧೩,೧೧೪ ಚಕ್ರಗಳ ಜಾಗೃತಿಯ ಸ್ವರೂಪ ನವನಿಧಿಗಳ ಸಾಗರವನ್ನೆ ಸೃಷ್ಟಿಸ ಬಲ್ಲ. ಸೃಷ್ಟಿಕರ್ಥ ಬ್ರಹ್ಮನ ಪ್ರತಿರೂಪ ಶಕ್ತಿಪ್ರಾಪ್ತಿಯಾಗುತ್ತದೆ.

## ೫) ಪರಬ್ರಹ್ಮತ್ವಸಿದ್ಧಿ



ಯಾವಾಗ ತ್ರೀನೇತ್ರ, ಪಂಚಭೂತ, ಅಷ್ಟಸಿದ್ಧಿ ಮತ್ತು ನವನಿಧಿಗಳು ೧೧೪ ಚಕ್ರಜಾಗೃತಿಯ ಫಲಸ್ವರೂಪವಾಗಿ ದೊರೆಯುವವೋ ಅವಾಗಲೇ ೧೧೪ಲ್ಲು ಚಕ್ರಗಳು ಶಾಶ್ವತವಾಗಿ ಜಾಗೃತ ಸ್ಥಿತಿಯಲ್ಲಿ ಸಿದ್ಧಿಸಿದಂತೆ. ಇದಾದ ನಂತರದ ಪಯನವೇ ಪರಬ್ರಹ್ಮತ್ವ ಸಿದ್ಧಿ.

೧೧೪ಲ್ಕಕ್ಕಿಂತಲು ಅಧಿಕ ಚಕ್ರಗಳಿವೆಯೇ ಎಂಬ ಪಾರ್ವತಿಯ ಪ್ರಶ್ನೆಗೆ ಉತ್ತರವಾಗಿ ಪಾರರ್ವತಿಯೇ ಪರಶಿವನ್ನು ಸ್ವತಃ ೧೧೪ ಚಕ್ರಜಾಗೃತಳಾಗಿ ಅರ್ಧಾಂಗಿಯಾಗಿ ೧೧೪+೧೧೪= ೨೨೮ ಚಕ್ರಗಳಿರುವುದನ್ನು ಸಾಬೀತು ಪಡಿಸಿ ಚಕ್ರಗಳ ಸಂಖ್ಯೇಯನ್ನು ಮಾತೆ ದ್ವಿಗುಣಗೂಳಿಸಿದಳು. ಈ ಮೂಲಕ ನಮಗೆ ೨೨೮ ಚಕ್ರಗಳು ಇರುವುದರಿಂದ ನಮ್ಮ ಪತ್ನಿಯೂ ಈ ಕುಂಡಲಿನಿ ಯೋಗಕ್ರೀಯಾ ಸಂಪನ್ನಳಾಗ ಬೇಕಾಗಿದೆ.

ಪತ್ನಿಯು ಗುರುಕುಲ ವಿದ್ಯಾಸಂಪನ್ನಳಾಗಿ ಆತ್ಮವಿದ್ಯಾಪಾರಂಗತಳಾಗಿ ಅರ್ಧಾಂಗಿಯಾಗಿ ೨೨೮ ಚಕ್ರಗಳು ಸಿದ್ಧಿಸಿದ ಮೇಲೆ ಪರಬ್ರಹ್ಮತ್ವದತ್ತ ಚಕ್ರಗಳು ಮುಂದುವರೆಯುವವು....

ಪರಬ್ರಹ್ಮತ್ವ ಪ್ರಾಪ್ತಿಯು ಅತ್ಯಧಿಕವಾದಾಗ ವೈಕುಂಠ ಪ್ರಾಪ್ತವಾಗುವುದು. ವೈಕುಂಠ ಪ್ರಾಪ್ತಿಯೊಂದಿಗೆ ಶ್ರೀ ಲಕ್ಷ್ಮೀನಾರಾಯನರ ದಿವ್ಯಸಾನಿಧ್ಯದಲ್ಲಿ ಗುಣಾತೀತರಾಗಿ ಚಿರಂಜೀವಿಯಾಗಿ ನೆಲೆಸ ಬಹುದು.

ಅತ್ಯುನ್ನತ ಸಂಪತ್ತು

**ಪರಬ್ರಹ್ಮಸಿದ್ಧಿ**



# ಅಧ್ಯಾಯ ೧

# ಶಂಬಲಾ (ಶಾಂಗ್ರೀಲಾ)

ಗೃಹಸ್ಥಾಶ್ರಮ

ಶ್ರೀ ಕಲ್ಕೀ ಭಗವಂತನ ಜನ್ಮಸ್ಥಳವೆಂದೇ ಪ್ರಚಲಿತ ಭವಿಷ್ಯಪುರಾಣದ ಉಕ್ತಿಯು ಶಂಬಲಾ ನಗರವು ಕಲಿಯುಗಾಂತ್ಯ ಕೇಸರೀ ಕಿರಣ ಜನ್ಮಸ್ಥಳವೆಂದು ವರ್ನಿಸಲ್ಪಟ್ಟಿದೆ. ಸತ್ಯಯುಗದಿಂದ ಕಲಿಯುಗದೊರೆಗು ಬೆಳೆದು ಬಂದ ರಾಕ್ಷಸಿ ಪ್ರವೃತ್ತಿಯನ್ನು ಸಂಹರಿಸಿ ದೈವತ್ವ ಪ್ರವೃತ್ತಿಗೆ ಆದಿಹಾಡುವ ಅನಂತ ಪದ್ಮನಾಭನ ಜನ್ಮಸ್ಥಳವೇ ಈ ಶಂಬಲ.

ಬ್ರಾಹ್ಮನ ಸಂಸ್ಕಾರದ  ವಾತಾವರಣದಲ್ಲಿ ಬೆಳೆದ ಬ್ರಾಹ್ಮನತ್ವ  ಪ್ರೀಯನಾದ ದಕ್ಷಿನ ಜಂಬೂದ್ವಿಪದ ಕಂದ, ಕಲಿಯುಗದ ಕರಾಳ ಮುಖ ಪರಿಚಯದಿಂದ ಜಾಗೃತನಾಗಿ ಹರಿ ಹರಾವತಾರಗಳಾದ  ಪರಶುರಾಮ ಮತ್ತು ಹನುಮಂತರ ದಿವ್ಯ ಆಶಿರ್ವಾದದೂಂದಿಗೆ ಗುರುಕುಲ ಶಿಕ್ಷಣ ಮುಗಿಸುವನು.

ತ್ರಿವಿದ್ಯಾ ವ್ರತ ಪಾರಂಗತ ಮಹಾತ್ಮ ಶ್ರೀ ಕಲ್ಕೀಪ್ರಭು 114 ಚಕ್ರ ಜಾಗೃತಿಯೊಂದಿಗೆ  ಪದ್ಮಿನಿ ಸೂರ್ಯವಂಶಜೆ ಪದ್ಮಾಳನ್ನು, ಸೂರ್ಯವಂಶಜೆ ರಮಾಳನ್ನು ವಿವಾಹವಾಗುವನು. ಇವರಿಬ್ಬರು ಶ್ರೀ ಮಹಾ ಲಕ್ಷ್ಮಿಯ ಅಂಶಗಳಾಗಿದ್ದು ಶ್ರೀ ಕಲ್ಕಿಯ ಸಾಮರ್ಥ್ಯವಾಗಿರುತ್ತಾರೆ. ಕಲಿಯುಗಾಂತ್ಯಕ್ಕೆ ಸಹಕರಿಸುತ್ತಾರೆ.



ಸತ್ಯ, ಪಾವಿತ್ರ್ಯ, ದಯೆ ಮತ್ತು ತಪಸ್ಸಿಗೆ ಬದ್ದರಾಗದ ಅಜ್ಞಾನಿ ಕಲಿ ಪ್ರಭಾವವಿರುವ ಸರ್ವರ ಸಂಹಾರಕ್ಕೆ ಸಿದ್ದನಾಗಿ ದೈವದತ್ತಾರೋಢನಾಗಿ ಧರ್ಮವನ್ನು ಉಳಿಸವಕಾರ್ಯಕ್ಕೆ ಆದಿಯಾಗುವನು.






# ನಿನ್ನನು ನೀನು ಗೆದ್ದರೆ, ಇಡೀ ಜಗತ್ತೆ ನಿನ್ನದಾಗುತ್ತದೆ.

ಈ ಹಿಂದೆ ಸ್ವಯಂ ಸೇವಕ ವ್ರತದ ಅಧ್ಯಯನ ಸಮಯದಲ್ಲಿ ನಾನು ನಿಮಗೆ ಮಾಹಿಸ್ಮತಿಯ ಕುರಿತು ಹಾಗೆ ಮಹೇಂದ್ರ ಪರ್ವತದ ಕುರಿತು ತಿಳಿಸಿರುವೆನು. ಆ ಸಮಯದಲ್ಲಿಯೇ ಶಂಬಲದ ಕುರಿತು ಚರ್ಚಿಸಿದ್ದೆನು. ಇಗ ಮತ್ತೊಮ್ಮೆ ಈ ನಗರ ಮತ್ತು ವಾಸ್ತವದ ಕುರಿತು ತಿಳಿಸಲು ಮಹಾವತಾರಿ ಬಾಬಾರ ದಿವ್ಯ ಅನುಭವವನ್ನು ಹೇಳುತ್ತೆನೆ.

ಈ ಹಿಂದೆ ಮಹಾವತಾರಿ ಬಾಬಾರನ್ನು ಹಲವಾರು ಬಾರಿ ಭೇಟಿ ಆಗಿದ್ದೆನೆ. ಮೊದಲ ಭೇಟಿಯ ಸೌಭಾಗ್ಯ ದೊರೆತದ್ದು ತೊರಗಲ್ಲಿನಲ್ಲಿ ಸೇರಿದ್ದ ನಾಗಾಸಾಧುಗಳ ಬಳಗವನ್ನು ನಾನು ಸೇರಿದಾಗ. ಆ ಸಮಯದಲ್ಲಿ ಅವರೇ ಅವತಾರಿ ಬಾಬಾ ಎಂದು ನನಗೆ ತಿಳಿದಿರಲಿಲ್ಲ. ಇತ್ತಿಚೆಗೆ ವಿಜಯೀ ವ್ರತದ ಅಧ್ಯಯನದ ಸಮಯದಲ್ಲಿ  ಓರ್ವಸಾಧುವಿನಿಂದ ಕೇಳಿತಿಳಿದಾಗ ಅವರೇ ಅವತಾರಿ ಬಾಬಾ ಎಂದು ತಿಳಿಯಿತು.

ಅವತಾರಿ ಬಾಬಾರನ್ನು ಮತ್ತೊಮ್ಮೆ ನೋಡಬೆಕೆಂಬ  ಆಸೆಯನ್ನು ವ್ಯಕ್ತಪಡಿಸಿದಾಗ ನನ್ನೆದುರಿದ್ದ ಸಾಧು ನಕ್ಕು ಸುಮ್ಮನಾಗಿ ಮುಂದೆ ಹೋಗಿ - ತಿರುಗಿ "ದೈವ ದೈವದರ್ಶನ ಸೌಭಾಗ್ಯ ಕ್ಷನ ಸಂಭವ, ಮಾನವದಾನವರಿಗೆ ಅವತಾರಿ ಬಾಬಾರ ದರ್ಶನ ಅಸಂಭವ!" ಎಂದು ಹೇಳಿ ಹೊರಟು ಹೋದರು. ಇದರ ಅರ್ಥ ನನಗೆ ತಕ್ಷನ ಅರಿವಾಯ್ತು.

ನಾನು ಧ್ಯಾನಸಾಧನೆಯತ್ತ ಸೂಕ್ತ ಜಾಗವನ್ನು ಹುಡುಕುತ್ತ ಹೊರಟೆ, ಆಗ ನಾಗಾಸಾಧುಗಳ ರಹಸ್ಯ ಸಿದ್ದಿಯ ಗುಹೆಗಳು ಕೇದಾರದಿಂದ ಸ್ವಲ್ಪದೂರದಲ್ಲಿವೆ. ಅಲ್ಲಿ ಹೋದಾಗ ಒಂದು ಗುಹೆಯಲ್ಲಿ ದೀಪದ ಬೆಳಕು ಬಿದ್ದಿದ್ದನ್ನು ಕಂಡೆ, ಯಾರೊ ಒಳಗಿರ ಬಹುದು ಎಂದು ತಿಳಿದು ಒಳಗೆ ಹೋದಾಗ ಅಚ್ಚರಿಯೇ ಎದುರಾಯಿತು. ಗುರುಕುಲದಲ್ಲಿ ನಾನು ಆತ್ಮವಿದ್ಯೆಯ ಕುರಿತು ಅರಿತಂತೆಯೇ ಅದ್ಭುತ ಸಾಧಕ ನೀಲಿಬಣ್ಣಕ್ಕೆ ತಿರುಗಿ ಹೊಳೆಯುತಿದ್ದನು. ಇದನ್ನು ಕಂಡು ಪರಮಾಶಚ್ಚರ್ಯದಿಂದ ಕೈ ಮುಗಿದು ಕುಳಿತೆನು. ಮೆಲ್ಲನೆ ಕಣ್ತೆರೆದು ಯಾವಾಗ ಬಂದೆ ವಿಕ್ರಮನೆಂದ ಕೂಡಲೆ ನಾನು ತಬ್ಬಿಬ್ಬಾದೆನು. ನೀವು ಯಾರು? ಎಂದಾಗ ನಿನ್ನಂತೆಯೆ ಸಾಧನೆಗಾಗಿ ಸಮಾಜ ತೊರೆದು ಬಂದವ ನಾನು, ಶ್ರೀ ಕೃಷ್ಣನ ಕಾಲದಿಂದಲು ಇಲ್ಲೆ ತಪವಾಚರಿಸುತ್ತ ಇದ್ದೆನೆ ಎಂದರು!.

ಆಗ ನಾನು ನಿಮ್ಮ ಹೆಸರೇನು ಮತ್ತು ನಾನು ಮಾತನಾಡುತ್ತಿರುವ ಕನ್ನಡ ನಿಮಗೆ ಹೇಗೆ ಪರಿಚಯ ಎಂದೆನು. ನಾನು ನಿನು ಮಾಡುತ್ತಿರುವ ಗುರುಕುಲ ಕಾರ್ಯವನ್ನು ಗಮನಿಸುತ್ತಲೆ ಇದ್ದೆನೆ. ಸಿದ್ದಾರ್ಥನ ಮಂದ ಬುದ್ದಿಯನ್ನು ತಿದ್ದಿ ತೀಡಿ ಶುದ್ದವಾಗಿಸುತ್ತ ಸಾಗಿರುವ ನಿನ್ನ ನಾಯಕತ್ವವನ್ನು ಆರಂಭಿಸಿದವರು ನಾವೆ ಕಂದ ಎಂದರು. ಆಗ ನಾನು ಯಾರು? ಎಂದೆನು. ತೋರಗಲ್ಲಿಗೆ ಬಂದಿದ್ದೆವಲ್ಲ ಅವರಲ್ಲಿ ನಾನು ಇದ್ದೆನು ಎಂದರು. ಆಗ ನಾನು ಅವತಾರಿ ಬಾಬಾ ನಿಮಗೆ ಗೊತ್ತಿರ ಬಹುದಲ್ಲ ಎಂದೆ. ಹೀಗೆ ಸಾಕಷ್ಟು ಪ್ರಶ್ನೆಗಳನ್ನು ಕೇಳತೊಡಗಿದೆನು.








ಅದಕ್ಕೆ ಸೂಕ್ಷ್ಮವಾಗಿ ನನ್ನನ್ನು ನೋಡಿ ಭಯಪಡದಿರುವ ನೀನು ನಿನ್ನ ಎಲ್ಲಾ ಪ್ರಶ್ನೆಗಳಿಗು ಉತ್ತರವನ್ನು ಪಡೆಯುವ ಅರ್ಹತೆಗಳಿಸಿರುವೆ, ಕೇಳು ಹೇಳುವೆ.

ನನ್ನ ದರ್ಶನವವನ್ನು ಹಲವಾರು ಜನ ಮಾಡಿದ್ದಾರೆ ಅದರಲ್ಲಿ ನಿನು ವಿಶೇಷ. ನಾನು ಹಲವಾರು ಸತ್ಯ ಸನಾತನ ಸಂಸ್ಕೃತಿಯನ್ನು ಅರಿಯ ಬಯಸಿದ ಸರ್ವರಿಗೂ ದರ್ಶನ ನೀಡಿ ಅವರಿಗೆ ಆಶಿರ್ವಾದ ಮಾಡಿದ್ದೆನೆ, ಹಿಮಾಲಯ ಭದ್ರಿನಾಥ, ಗೋರಖನಾಥ ಕ್ಷೇತ್ರಗಳ ಆಸುಪಾಸಿನಲ್ಲಿಯೇ ನನ್ನ ವಾಸ. ನನ್ನ ಹೆಸರು ನಾಗರಾಜ. ಬಾಲ್ಯದಲ್ಲೆ ಮನೆ ತೊರೆದೆ. ಗೋರಖನಾಥ ಪ್ರಭುವೇ ನನ್ನ ಗುರುವಾದುರು. ಅಗಸ್ಥ್ಯರನ್ನು ಗುರುವಾಗಿ ಪಡೆಯಲು ಸೂಚಿಸಿದ ಗೋರಖನಾಥರ ಮಾರ್ಗದರ್ಶನದಂತೆ ಕಠಿನ ತಪಗೇದು ತ್ರೀನೇತ್ರ ಜಾಗೃತ ಗೊಳಿಸಿಕೊಂಡೆ. ನಂತರ ಅಗಸ್ಥ್ಯರ ಮಾರ್ಗದರ್ಶನದಲ್ಲಿ ಪ್ರಾಣಾಯಾಮ ಮತ್ತು ಕ್ರಿಯಾ ಕುಂಡಲಿನಿಯಲ್ಲಿ ಯಶಸ್ವಿಯಾಗಿ ಸಮಾಧಿ ಸ್ಥಿತಿಯ ಕೊನೆಯ ಹಂತ ಸೌರಭಸಮಾಧಿಯನ್ನು ಪ್ರಾಪ್ತವಾಗಿಸಿ ಕೊಂಡೆನು. ಶ್ರೀ ಕೃಷ್ಣನನ್ನು ಭೇಟಿಯಾಗಿದ್ದೆನೆ. ತೊರಗಲ್ಲಿನ ಗುಹೆಯ ಪ್ರವೇಶಕ್ಕೆ ಬಲರಾಮನೇ ಕಾರಣ. ಬಲರಾಮ ರಚಿತ ಮಾನಿಕ್ಯ ಮಾಧವ ಗ್ರಂಥವನ್ನು ನಾನೇ ಕುದ್ದಾಗಿ ರೇಣುಕಾ ಸಾಮ್ರಾಜ್ಯದಲ್ಲಿ ಅಡಗಿಸಿಟ್ಟಿದ್ದೆ.

ಯಾರು ಆತ್ಮವಿದ್ಯೆಯ ಶ್ರೇಷ್ಠ ಹಂತ ಸೌರಭ ಸಮಾಧಿ ಸ್ಥಿತಿ ತಲುಪುವರೋ ಆರಂಭದಲ್ಲಿ ಅವರು ಅವತಾರಿಗಳಾಗುವರು. ಈ ಕ್ರೀಯೆಯ ಉನ್ನತಿಯೇ ಮಹಾವತಾರಿ ಸ್ಥಿತಿ. ಮಹಾವತಾರಿ ಬಾಬಾ ಎಂದು ಇಂದು ಜನ ನನ್ನನ್ನು ಕರೆಯುವ ರೂಢಿ ಪ್ರಾರಂಭವಾಗಿದೆ. ಎಂದ ತಕ್ಷನ ನನಗೆ ಅಚ್ಚರಿಯಾಗಿ ಪ್ರೇಮಭಾವದಿಂದ ಮುಕ್ತಮಹಾಗುರುವಾದ ನೀವು ನನಗೆ ಸಿಕ್ಕಿದ್ದು ನನ್ನ ಪುನ್ಯವೆಂದು ನಾನು ನುಡಿದಾಗ ಅವರು ಇಲ್ಲ ವಿಕ್ರಮ ನೀನು ನನಗೆ ದೊರಕಿದ್ದು ನನ್ನ ಭಾಗ್ಯ ಎಂದು ನೀಲಿ ಬಣ್ಣದ ಅವರ ಮೈ ಸಾಮಾನ್ಯ ಮೈ ಬನ್ನಕ್ಕೆ ತಿರುಗಿದಾಗ ಅವರ ವಯಸ್ಸು 18 ರಿಂದ 25ರ ವಯಸ್ಸಿನೊಳಗೆ ಇದ್ದಂತೆ ಭಾಸವಾಗುವ ಮೈಕಟ್ಟು ಅವರದಾಗಿತ್ತು. ಚಿರಂಜೀವಿಗಳೇ ಇವರಾಗಿರುವುದನ್ನು ಕಂಡು ನನಗೆ ಅತೀವ ಸಂತೋಷವಾಯ್ತು. ನಿಮಗೆ ಕೃಷ್ಣ ಬಲರಾಮರು ಭೇಟಿಯಾಗಿ ಸಿಕ್ಕಿದ್ದು ಸತ್ಯವೇ ಎಂದು ನಾನು ಇವರನ್ನು ಕೇಳಿದಾಗ ಅವರು. ಅದರ ಕುರಿತು ಹೇಳುವುದೊಂದೆ ಬಾಕಿ ಇರುವ ವಿಚಾರ ಹೇಳುವೆ ಕೇಳು ಎಂದು ಹೇಳಲು ಪ್ರಾರಂಬಿಸಿದರು.






## ಚತುರಾಶ್ರಮ ಪಾಲನೇ ಅನವಶ್ಯ ಶ್ರಮದ ನಿರ್ಮೂಲನೆಗೆ ಸೂತ್ರ. ಈ ಮಾರ್ಗವಾದ ಬದುಕೆ ಜಿವನಾಮೃತಸೂತ್ರ

ಮಹಾವತಾರ ಸ್ಥಿತಿ ತಲುಪಿದವರ ಆಶ್ರಯ ತಾನವೇ ಶಂಬಲ. ದಶದಿಕ್ಕುಗಳು ಸೇರುವ ತಾನವೇ ಈ ಶಂಬಲಕ್ಕೆ ಮಾರ್ಗ. ಈ ತಾನವೂ ಪರಬ್ರಹ್ಮದಿಂದ ಸೃಷ್ಠಿಸಲ್ಪಟ್ಟ ಕಾರಣಕ್ಕೆ ಇದು ಸ್ವರ್ಗವಾಗಿರುವುದು. ಶರೀರ ಸಮೇತರಾಗಿ ಪ್ರವೇಶ ಪಡೆಯ ಬಹುದಾದ ಸ್ವರ್ಗವಾಗಿದೆ. ಇಲ್ಲಿ ಒಮ್ಮೆ ಪ್ರವೇಶ ಪಡೆದರೆ ಪರಬ್ರಹ್ಮತ್ವದೊಂದಿಂಗೆ ಅತ್ಯುನ್ನತ ದೈವತ್ವಕ್ಕೆ ಶರೀರ ಸಮೇತರಾಗಿ ತಲುಪ ಬಹುದು. ಈ ಕ್ಷೇತ್ರಪ್ರವೇಶಕ್ಕೆ ಮಹಾವತಾರಿಗಳಾಗುವುದು ಅವಶ್ಯಕ. ಎಂದು ಹೇಳಿದರು. ವಿಕ್ರಮ ನೀನು ಮಹಾವತಾರವನ್ನು ಸಿದ್ಧಿಸಿಕೊ ಎಂದರು.

ಅವಾಗ  ಕಲ್ಕಿಯಾಗುವುದು ಭುವಾಸಿಗಳಿಂದ ಅಸಾಧ್ಯವಾಗುವುದೋ ಎಂದು ಚಿಂತಿಸಿ " ಗುರವೇ,  ಕಲ್ಕಿಯಾಗುವುದು ಭುವಾಸಿಗಳಿಗೆ ಸಾಧ್ಯವಿದೆಯಾ ಅಥವಾ ಭವಿಷ್ಯ ಪುರಾಣದಂತೆಯೇ ಶಂಬಲದಲ್ಲೇ ಜನ್ಮವಾದವರಿಗೆ ಮಾತ್ರ ಕಲ್ಕಿಯಾಗುವ ಹಕ್ಕಿದೆಯೇ" ಎಂದೆನು. ಆಗ "ವಿಕ್ರಮ ಮಹಾವತಾರಿಯೇ ದೈವ, ಶಂಬಲದಲ್ಲಿರುವ ಸರ್ವರು ಮಹಾವತಾರಿಗಳೆ. ಅವರು ಭವಿಷ್ಯದ ಭಗವಂತರಾಗುವುದು ಸಾಮಾನ್ಯ. ಭೂವಾಸಿಗಳಿಂದ ಇದು ಅತ್ಯಂತ ಖಠಿಣವಾಗುತ್ತದೆ. ಆದರೆ ಇಂದು ಶಂಬಲ ನಿವಾಸಿಗಳೆಲ್ಲರು ಮೂದಲು ಭುವಾಸಿಗಳೆ ಆಗಿದ್ದರು ಎನ್ನುವುದನ್ನು ಮರೆಯ ಬೇಡ." ಎಂದಿದ್ದರು.

ವ್ರಥದಾರಿ ಮಿತ್ರರೆ ನಮಗಿಂತಲು ಈ ಮೊದಲು ಪರಬ್ರಹ್ಮತ್ವ ಪ್ರಾಪ್ತರಾದ ಮಹಾಪುರುಶರು ಶಂಬಲ ನಿವಾಸಿಗಳಿಂದಲೇ ನಾವು ಶಂಬಲದ ಕುರಿತು ಅರಿತು ಧನ್ಯರಾದೆವು. ಯಾವಾಗ ಸೌರಭ ಸಮಾಧಿ ಸಿದ್ಧಿಸುತ್ತದೋ ಅವಾಗ ಶಂಬಲ, ಮಹೇಂದ್ರ ಪರ್ವತ, ಕೈಲಾಸ, ವೈಕುಂಠ ಮತ್ತು ಬ್ರಹ್ಮ ಲೋಕಗಳೆಲ್ಲವನ್ನು ಶರೀರ ಸಮೇತರಾಗಿ ನೋಡುವ ಸೌಭಾಗ್ಯ ದೊರೆಯುತ್ತದೆ.

ಯಾರು ಕೀಪುಮಾ ಸಮರಕಲೇಯನ್ನು ಕಲೆಯುವರೋ ಅವರು ತಮ್ಮ ೨೫ನೇ ಸಂವತ್ಸರದ ನಂತರ ಗೃಹಸ್ಥಾಶ್ರಮವನ್ನು ಶಂಬಲದಲ್ಲೆ ಪ್ರಾರಂಬಿಸುವುದು ಅತ್ಯುತ್ತಮ. ಪ್ರಕೃತಿ ಸೇವಕರಾದ ನಾವು ಪ್ರಕೃತಿಯ ಕಣ ಕಣವನ್ನು ಪರಬ್ರಹ್ಮತ್ವಕ್ಕೆರಿಸುವ ಕಾರ್ಯವನ್ನು ಮಾಡುವ ಸಲುವಾಗಿ ಶಂಬಲ ನಾಮಧೇಯವಿರುವ ಊರನ್ನು ವ್ರತಧಾರಿಗಳಿಂದಲೇ ಆರಂಭಿಸಿ ಪೃತ್ವಿಯ ಮೇಲೆಯೇ ಶಂಬಲವನ್ನು ಸೃಷ್ಠಿಸೋನ. ಕರ್ಮಫಲಾನುಸಾರ ಜನರ ಬೆಂಬಲ ದೊರೆಯುವುದು. ಇರಲಿ ಸದೃಢ ಸಮಾಜ ನಿರ್ಮಾನವವನ್ನು ನಮ್ಮ ಕುಟುಂಬವನ್ನು ಪರಬ್ರಹ್ಮತ್ವಕ್ಕೇರಿಸುವ ಕಾರ್ಯ ಮಾಡೋನ.

**ಗೃಹಸ್ಥಾಶ್ರಮ**

ಸಂಪೂರ್ಣ ಗುರುಕುಲ ವಿದ್ಯೆಯನ್ನು ಹೆಂಡತಿಗೆ ಮತ್ತು ಮಕ್ಕಳಿಗೆ ತಿಳಿಸಿ ಸನಾತನ ಸಂಸ್ಕೃತಿಯನ್ನು ತಮ್ಮ ಕುಟುಂಬದಲ್ಲಿ ಅಳವಡಿಸಿ ಕೊಳ್ಳುವುದು. ಬ್ರಹ್ಮಚರ್ಯಾಶ್ರಮದಲ್ಲಿ ಅರಿತ ಸರ್ವವನ್ನು ತನ್ನ ಕುಟುಂಬದ  ಸರ್ವರಿಗೂ  ಶ್ರಾವನ ಮಾಸದಲ್ಲಿ ಧಾರೆ ಎರೆಯುವುದು. ಸುಜೀವನ ವ್ರತ  ಸಂಪೂರ್ಣ ಗೂಳಿಸುವುದು ಈ ಆಶ್ರಮದ ಕರ್ಥವ್ಯ.



# ಅಧ್ಯಾಯ ೦೨

## ವಿಶ್ವವಿಜಯೀ ವ್ರತ



### ವಾನಪ್ರಸ್ಥಾಶ್ರಮ

ಸುಜೀವನ ವ್ರತವು ಸಂಪೂರ್ಣಗೊಂಡ ನಂತರದ ತೃತಿಯ ಆಶ್ರಮವೇ ಈ ವಾನಪ್ರಸ್ಥಾಶ್ರಮ. ವಾನಪ್ರಸ್ಥಾಶ್ರಮವು ಕುಟುಂಬದಿಂದಿಚೆಗಿನ ಸಂಪೂರ್ಣ ಸಮಾಜಕ್ಕೆ ಮಾರ್ಗದರ್ಶನಮಾಡುವ ಕಾರ್ಯವನ್ನು ಒಳಗೊಂಡಿದೆ.



ಮೊದಲು ರಾಜರು ಅಶ್ವಮೇಧ ಯಾಗವನ್ನು ಮಾಡಿ ಧರ್ಮವನ್ನು ಸಂಪೂರ್ಣ ರಾಷ್ಟ್ರವನ್ನು ಒಂದು ಗೂಡಿಸುತಿದ್ದರು. ಕಲಿಯುಗದಲ್ಲಿ ರಾಜನೇ ರಾಕ್ಷಸನಾಗಿರುವಾಗ ಈ ರೀತಿಯ ಯಾಗ ಮಾಡಲು ಅಸಾಧ್ಯವಾಗಿದೆ. ಅದಕ್ಕಾಗಿ ವಿಶ್ವವಿಜಯೀ ವ್ರತವನ್ನು ಕೈಗೂಂಡು ಸಂಪೂರ್ಣ ಪೃತ್ವಿಯಿಂದಲೇ ಅಜ್ಞಾನವನ್ನು ಕಿತ್ತೆಸೆದು. ಅಧರ್ಮವನ್ನು ಮೆಟ್ಟಿನಿಂತು ಸ್ವರ್ಗವನ್ನು ಸೃಷ್ಟಿಸಿ ಪೃತ್ವಿ, ಸ್ತ್ರೀ ಮತ್ತು ಸಂಸ್ಕೃತಿಯನ್ನು ಶಾಶ್ವತವಾಗಿ ಸುಂದರಮಯವಾಗುವ ರೀತಿಯಲ್ಲಿ ಇಡುವುದೇ ಈ ವಿಶ್ವವಿಜಯೀ ವ್ರತ.

ವಿಶ್ವವಿಜಯೀ ವ್ರತವನ್ನು ಆಚರಸುವ ಪದ್ದತಿ, ಅರ್ಹತೆ ಮತ್ತು ಆದ್ಯತೆಯ ಕುರಿತು ಚರ್ಚಿಸೋನ. ವಿಶ್ವವಿಜಯೀ ವ್ರತಕ್ಕೆ ಅರ್ಹತೆ :
ಒಂದು ತ್ರಿವಿದ್ಯಾವ್ರತ ಪಾರಂಗತನಾಗಿರ ಬೇಕು. ಎರಡು ಗೃಹಸ್ಥಾಶ್ರಮದ ಸುಜೀವನ ವ್ರಥ ಸಂಪನ್ನನಾಗಿರ ಬೇಕು. ಇಷ್ಠಿದ್ದರೆ ಅರ್ಹತೆ ಸಿಕ್ಕಂತೆ.






# ವಿಶ್ವವಿಜಯೀ ವ್ರತ ಆಚರಣಾ ಪದ್ಧತಿ.

ಕನಿಷ್ಠ ನಾಲ್ಕು ಶಿಶ್ಯರಿಗೆ ಈ ವಿದ್ಯೇಯನ್ನು ಧಾರೆಯೆರೆಯ ಬೇಕು. ಆ ನಾಲ್ಕು ವಿದ್ಯಾರ್ಥಿಗಳಲ್ಲಿರುವ ಕಲಿಯ ಸಂಹಾರ ಕಾರ್ಯವೇ ಕಲಿಯಾಂತ್ಯ ಕ್ರಿಯೇ. ಈ ರೀತಿಯಲ್ಲಿ ನಾಲ್ಕು ವಿದ್ಯಾರ್ಥಿಗಳನ್ನು ಕೃಷ್ಣಭಕ್ತರನ್ನಾಗಿಸಿ ಮುಂದೆ ಅವರಿಗೂ ವಿಶ್ವವಿಜಯೀ ವ್ರತವನ್ನು ಆಚರಿಸಲು ಸೂಚಿಸಿದ್ದನ್ನು ಅವರು ಪಾಲಿಸಿ ತಮ್ಮ ಶಿಶ್ಯರಿಗೆ ಸೂಚಿಸುತ್ತ ಈ ಬಂಧ ಹೀಗೆ ಮುಂದು ವರೆಯುತ್ತ ಸಾಗಿದರೆ ಈ ವ್ರತ ಸಂಪನ್ನ.



ಮೇಲಿನ ಚಿತ್ರ ಗುರುಕುಲದ ಶಿಶ್ಯವೃಂದ ಅನಂತದತ್ತ ಬೆಳೆಯುತ್ತಿರುವುದನ್ನು ಸೂಚಿಸುತ್ತದೆ.









ವಿಶ್ವವಿಜಯೀ ವ್ರತದಂತೆಯೇ ಪರಬ್ರಹ್ಮತ್ವದತ್ತ ನಾಲ್ಕು ವ್ರತಧಾರಿಗೆ
ಮಾರ್ಗದರ್ಶನ ನೀಡುವುದೇ ಸತ್ಯಯುಗ ಸೃಷ್ಠಿ ಸಂಕಲ್ಪವ್ರತ.





## ಅಗ್ನಿ ಗುರುಕುಲ ವಿದ್ಯಾರ್ಥಿ

ವ್ರಥಧಾರಿ : ಮಂಜುನಾಥ ಬೆಳ್ಳಿಕುಪ್ಪಿ
ಜನನ : ಶ್ರಾವನಮಾಸ ಪ್ರತಿಪದಾ ಕ್ರಿ.ಶ ೨೦೦೧
ಜನ್ಮಸ್ಥಳ : ಸವಟಗಿ । ಬೆಳಗಾವಿ । ೫೯೧೧೦೪
ಪ್ರಥಮ ಋತು ಅದ್ಯಾಯ : ೨೦೦೫

ಶ್ರೀ ಕುಮಾರ ಮಂಜುನಾಥ ಬೆಳ್ಳಿಕುಪ್ಪಿ ಕಲಿಯುಗದ ಪ್ರಥಮ ಅಗ್ನಿಗುರುಕುಲದ ವಿದ್ಯಾರ್ಥಿ ಆಗಿದ್ದು, ಜಮದಗ್ನಿ ಪುತ್ರ ಪರಶುರಾಮರಿಂದ ಸ್ಥಾಪಿತ ಅಗ್ನಿಗುರುಕುಲದಲ್ಲಿ ಭೋಧಿಸುವ ಸರ್ವವಿದ್ಯೆಗಳ ಜ್ಞಾನ ಸಂಗ್ರಹವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದ ಗುರುಕುಲ ಪ್ರೇಮಿ. ಕೀಪುಮಾ ಸಮರಕಲೆ ಸನ್ಮಾರ್ಗಗ್ರಂಥ ಸನಾತನ ಮಾನವ ಸಂಕುಲ ತಮ್ಮ ಜನ್ಮಸಾರ್ಥಕತೆಗಾಗಿ ಒಮ್ಮೆ ಆದರು ಓದಲೇ ಬೇಕಾದ ಗ್ರಂಥ.

ಶ್ರೀ ಕಲ್ಕೀ ಮತ್ತು ಪರಶುರಾಮರ ಸಂವಾದದೊಂದಿಗೆ ಸನಾತನ ಭಾರತೀಯ ಸಂಸ್ಕೃತಿಯ ಭವ್ಯವೈಭೋಗ ಮತ್ತು ಬ್ರಹ್ಮ - ಬ್ರಹ್ಮಾಂಡ ಜ್ಞಾನದ ಕುರಿತು ಅರಿತ ನಂತರ ಸೃಷ್ಠಿಯ ಸಂರಕ್ಷಣೇಯ ಹೋಣೆಹೊತ್ತ ಕಲ್ಕಿಯ ಮನದಾಳದ ಮಾತುಗಳೇ ಈ ಪುಸ್ತಕದ ಪ್ರತಿ ಸಾಲುಗಳು.

ಸತ್ಯಯುಗಕ್ಕೆ ನಾಂದಿಯಾದ ಶ್ರೀ ಕಲ್ಕಿಯ ಸಂದೇಶವೇ ಈ ಸನ್ಮಾರ್ಗ ಗ್ರಂಥ. ಕೀಪುಮಾ ಎಂದರೇ ಸಂಸ್ಕೃತಿಯನ್ನು ರಕ್ಷಿಸು ಎಂಬ ಕರೆ. ಪರಶುರಾಮರು ಶ್ರೀ ಕಲ್ಕಿಗೆ ಹೇಳಿದ ಕೊನೆಯ ಮಾತು ಮತ್ತು ಭೋದನೆ ಅಥವಾ ಆದೇಶ ಕೀಪುಮಾ ಎಂಬ ನುಡಿ. ಶ್ರೀ ಕಲ್ಕೀಯು ಸದಾ ಸ್ಮರಿಸುವ ಬೀಜ ಮಂತ್ರವೇ ಕೀಪುಮಾ. ಕಲ್ಕಿಯು ಕೀಪುಮಾಗಾಗಿ ನಿರ್ಮಿಸಲು ಹೊರಟ ಸತ್ಯಯುಗ ಸೈನ್ಯಕ್ಕೆ ಕೀಪುಮಾ ಸಮರಕಲೆಯೇ ಮಾರ್ಗದರ್ಶಕ ಸುವಿದ್ಯೆ.

- ಅಂಜನಿಸುತ


KRANTI SANDESH PUBLICATION ®
श्री सूर्यनारायन पहाड । महेंद्र पर्वत । संबल ।
सवटगि - 591104
